


# ಸಪ್ತಗಿರಿ

ತಿರುಮಲ ತಿರುಪತಿ ದೇವಸ್ಥಾನಗಳ
ಸಚಿತ್ರ ಮಾಸ ಪತ್ರಿಕೆ

ಬೆಲೆ ಒಂದು ರೂಪಾಯಿ

ಫೆಬ್ರವರಿ 84





ಭೀಮಲಿಂಗೇಶ್ವರಸ್ವಾಮಿ – ಕೈವಾರ

ಅಯ್ಯಾ ನೀ ಕೇಳಿದರೆ ಕೇಳು, ಕೇಳದಿದ್ದರೆ ಮಾಣು
ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀನೊಲಿದರೆ ಒಲಿ ಒಲಿಯದಿದ್ದರೆ ಮಾಣು
ನಾ ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀನೋಡಿದರೆ ನೋಡು ನೋಡದಿದ್ದರೆ ಮಾಣು
ನಾನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ
ಸೈರಿಸಲಾರೆನಯ್ಯಾ
ಚೆನ್ನ ಮಲ್ಲಿಕಾರ್ಜುನಯ್ಯ ನಾ ನಿಮ್ಮ ಪೂಜಿಸಿ
ಹರುಷದೊಳಾಡುವೆನಯ್ಯ

— ಅಕ್ಕ ಮಹಾದೇವಿ




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೪]     ಫೆಬ್ರವರಿ ೧೯೮೪     [ಸಂಚಿಕೆ ೯


# ವಿಷಯಸೂಚಿ


| | | |
|---|---|---|
| ವಾರ್ತಾಲಹರಿ | | ...3, 39 |
| ಸಂಪಾದಕೀಯ | | ... 4 |
| ಶ್ರೀಮದ್ಭಗವದ್ಗೀತೆ | | ... 5 |
| ಶ್ರೀ ರಾಮಾನುಜರ ನಂತರದ ಆಚಾರ್ಯ ಪೀಠಗಳು | ಡಾ ॥ ಎನ್. ಅನಂತರಂಗಾಚಾರ್ | ... 7 |
| ಯಮುನಾವಿಹಾರಿ ಕೃಷ್ಣ | ಆದ್ಯ ರಾಮಾಚಾರ್ಯ | ... 13 |
| ತಿ. ತಿ. ದೇವಸ್ಥಾನಗಳು – ಅರ್ಧ ಶತಕದ ಆಡಳಿತ ವ್ಯವಸ್ಥೆ | ನಾಗರಾಜ್ | ... 21 |
| ಜ್ಯೋತಿರ್ಲಿಂಗಗಳು | ಬಿ- ಬಸವರಾಜ್ ಶೇಟ್ | ... 29 |
| **ಹರಿದಾಸವಾಣಿ** | | |
| ಶ್ರೀ ಗೋಪಾಲದಾಸರು | ಡಾ ॥ ಕೆ. ಗೋಕುಲನಾಥ್ | ... 9 |
| ನಿನ್ನ ದರುಶನ ಪಡೆದಂತೆ | ಕುಮುದಪ್ರಿಯ | ... 12 |
| **ಯುವವಾಣಿ** | | |
| ಸಂಸ್ಕೃತಿ | ಚಿ. ನ. ಕೃಷ್ಣಮೂರ್ತಿ | ... 17 |
| **ಗೃಹಲಕ್ಷ್ಮಿ** | | |
| ಅಹಲ್ಯಾಬಾಯಿ ಹೋಳ್ಕರ್ | ಜಯಶ್ರೀ ಜಿ. ಭಟ್ | ... 23 |
| **ಕಿಶೋರಜಗತ್** | | |
| ಹಿರಿಯರು ಯಾರು ? | ಬ. ನ. ಗುಂಡೂರಾವ್ | ... 25 |
| ಕರ್ನಾಟಕದಲ್ಲಿ | | ... 37 |

## ವಾರ್ತಾವಳಿ

## ಭಕ್ತಿ ಗೀತೆಗಳನ್ನು ಉಚಿತವಾಗಿ ಹಂಚುವ ಯೋಚನೆ

ಹಿಂದೂ ಧರ್ಮದಲ್ಲಿನ ಸಂಘ ಸಂಸ್ಥೆಗಳಿಗೆ ತಿ. ತಿ. ದೇ. ಭಕ್ತಿಗೀತೆಗಳ ಕ್ಯಾಸೆಟ್‌ಗಳನ್ನು ಉಚಿತವಾಗಿ ಹಂಚಬೇಕೆಂಬ ದಿಕ್ಕಿನಲ್ಲಿ ಯೋಚಿಸಲಾಗುತ್ತಿದೆ – ಎಂದು ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ ಯವರು ಹೇಳಿದರು. ಶ್ರೀಯುತರು ಹಿಂದೂ ಧರ್ಮರಕ್ಷಣ ಸಂಸ್ಥೆಯವರು ಈ ವರ್ಷದಲ್ಲಿ ನಡೆಸಿದ ಪುರಾಣ ಪ್ರಬೋಧ ಪರೀಕ್ಷೆಗಳಲ್ಲಿ ಪ್ರಾಂತ್ಯ, ಜಿಲ್ಲಾ ಸ್ಥಾಯಿಗಳಲ್ಲಿ ಪ್ರಥಮ ದ್ವಿತೀಯ ತೃತೀಯ ಸ್ಥಾನಗಳಿಸಿದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದ ಸಭೆಯಲ್ಲಿ ಬಹುಮಾನ ವಿತರಣೆ ಮಾಡುತ್ತ 'ಹಿಂದೂ ಧರ್ಮರಕ್ಷಣ ಸಂಸ್ಥೆ ಹಿಂದೂ ಧರ್ಮ ಪ್ರಸಾರದಲ್ಲಿ ಈಗ ಮಾಡುತ್ತಿರುವುದು ಬಹಳ ಕಡಿಮೆಯೆಂದೂ ಮಾಡಬೇಕಾದದ್ದು ಬಹಳಷ್ಟಿದೆ' ಎಂದೂ ನುಡಿಯುತ್ತಿದ್ದರು.

ಸಭೆಯಲ್ಲಿ ಮಾತನಾಡಿದ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಸಮುದ್ರಾಲ ಲಕ್ಷ್ಮಣಯ್ಯ ಅವರು ಆಂಧ್ರ ಪ್ರದೇಶದ ಎಲ್ಲ ಪ್ರೌಢಶಾಲೆಗಳಿಂದಲೂ 15,000 ಮಂದಿ ವಿದ್ಯಾರ್ಥಿಗಳು ಈ ಪರೀಕ್ಷೆಗಳಲ್ಲಿ ಆಸಕ್ತರಾಗಿ ಭಾಗವಹಿಸಿದ್ದರೆಂದು ತಿಳಿಸಿದರು.

ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು ಪ್ರಾಂತೀಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ ಮೊದಲ ಮೂರು ಸ್ಥಾನಗಳಿಸಿದವರಿಗೆ ವೆಂಕಟೇಶ್ವರಸ್ವಾಮಿಯ ಬೆಳ್ಳಿಯ ಪದಕಗಳನ್ನು ಬಹುಮಾನಿಸಿದರು. ಪ್ರಾಂತ್ಯ ಪ್ರಥಮ ಸ್ಥಾನದ ಶಾಲೆಯನ್ನೂ, ಅತ್ಯಧಿಕ ಮಂದಿ ವಿದ್ಯಾರ್ಥಿಗಳನ್ನು ಪರೀಕ್ಷೆಗೆ ನೀಡಿದ ಶಾಲೆಯನ್ನೂ, ಅತ್ಯಧಿಕ ಫಲಿತಾಂಶ ಪಡೆದ ಶಾಲೆಯನ್ನೂ ಷೀಲ್ಡ್ ನೀಡುವುದರ ಮೂಲಕ ಗೌರವಿಸಲಾಯಿತು. (ಕೊನೆಯ ಎರಡು ಷೀಲ್ಡ್‌ಗಳೂ ತಿರುಮಲೆಯ ಪ್ರೌಢಶಾಲೆಗೆ ದಕ್ಕಿದವು.)



ಪ್ರಥಮ ಮೂರು ಸ್ಥಾನಗಳನ್ನು ಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನ ನೀಡುತ್ತ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ

## ರ್‍ಯಾಂಕ್ ವಿಜೇತರು

ಪುರಾಣ ಪ್ರಬೋಧ ಪರೀಕ್ಷೆಗಳಲ್ಲಿ ಆಂಧ್ರ ಪ್ರದೇಶದ ಮೊದಲ ಮೂರು ಸ್ಥಾನಗಳನ್ನು ಪಡೆದ ವಿದ್ಯಾರ್ಥಿಗಳೆಂದರೆ ಚಿ॥ ಮುನಿರಾಜು, ಕೊಡಿಗೇನಹಳ್ಳಿ ಪ್ರೌಢಶಾಲೆ, ಅನಂತಪುರ ಜಿಲ್ಲೆ (ಪ್ರಥಮ) ಚಿ॥ ಎಸ್. ವಸುಂಧರ, ವೇಪರಾಲ ಪ್ರೌಢಶಾಲೆ, ಕಡಪ ಜಿಲ್ಲೆ (ದ್ವಿತೀಯ) ಚಿ॥ಪಿ. ಶಾಂತ, ಮಟ್ವಾಡ ಪ್ರೌಢಶಾಲೆ, ವರಂಗಲ್ ಜಿಲ್ಲೆ (ತೃತೀಯ)– ಅವರುಗಳು. ಜಿಲ್ಲಾ ಸ್ಥಾಯಿಯಲ್ಲಿ ರ್‍ಯಾಂಕ್ ಪಡೆದ ಇತರ ಧರ್ಮದವರೆಂದರೆ ಚಿ॥ ನಾಯಕಲು ರಾಮುಡು (ಕರ್ನೂಲು ಜಿಲ್ಲೆ) ಚಿ॥ ಮೊಹಮ್ಮದ್ ರಹೀಮುದ್ದೀನ್ (ಮೇಡಕ್ ಜಿಲ್ಲೆ) ಚಿ॥ ಮುನವರ್ (ನಲ್ಗೊಂಡ ಜಿಲ್ಲೆ) ಅವರುಗಳು.

## ಹೊಸ ಡೆಪ್ಯೂಟಿ ಇ. ಓ. ಶ್ರೀ ಬಿ. ಕೇಶವುಲು

ತಿರುಮಲೆ – ತಿರುಪತಿ ದೇವಸ್ಥಾನಗಳ ಹೊಸ ಡೆಪ್ಯೂಟಿ ಇ. ಓ. ಆಗಿ ಶ್ರೀ ಬಿ. ಕೇಶವುಲು ಅವರು ಡಿಸೆಂಬರ್ 15 ರಂದು ಅಧಿಕಾರವನ್ನು ವಹಿಸಿಕೊಂಡರು. ಆಂಧ್ರ ದೇವಾದಾಯ ಇಲಾಖೆಯಲ್ಲಿ ಡೆಪ್ಯೂಟಿ ಕಮೀಷನರ್ ಶ್ರೇಣಿಗೆ ಸೇರಿದ ಶ್ರೀ ಕೇಶವುಲು ಅವರು ಇದುವರೆಗೆ ಅನ್ನವರಂನ ಸತ್ಯನಾರಾಯಣಸ್ವಾಮಿ ದೇವಾಲಯದ ಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದರು. ತಿ. ತಿ. ದೇವಸ್ಥಾನಗಳ ಡೆಪ್ಯೂಟಿ ಇ. ಓ. ಆಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಟಿ. ಎಸ್. ಎಸ್. ಎಸ್. ರಾಜು ಅವರ ವರ್ಗಾವಣೆಯ ನಂತರ ಈ ಹುದ್ದೆಗೆ ಶ್ರೀ ಬಿ. ಕೇಶವುಲು ಅವರು ಬಂದಿದ್ದಾರೆ.

## ಶ್ರೀವೆಂಕಟೇಶ್ವರಸ್ವಾಮಿ ದರ್ಶನಕ್ಕೆ ಮಾರಿಷಸ್ ಪ್ರಧಾನಿಯ ಸತೀಮಣಿ

ಮಾರಿಷಸ್‌ನ ಪ್ರಧಾನ ಮಂತ್ರಿ ಶ್ರೀ ಜಗನ್ನಾಥ್ ಅವರ ಪತ್ನಿ ಶ್ರೀಮತಿ ಸರೋಜಿನೀದೇವಿ ಈಚೆಗೆ ತಿರುಮಲೆಗೆ ಬಂದು ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿ ಆರಾಧನೆ ಮಾಡಿದರು. ಮದರಾಸಿನಿಂದ ತಿರುಮಲೆಗೆ ಬಂದ ಶ್ರೀಮತಿಯವರನ್ನು ತಿ. ತಿ. ದೇವಸ್ಥಾನಗಳ ಸಹಾಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ವೆಂಕಟೇಶ್ವರುಲು ಅವರು ಸ್ವಾಗತಿಸಿ ಆಲಯದ ಚರಿತ್ರೆಯನ್ನೂ, ತಿ. ತಿ. ದೇ. ಕೈಗೊಂಡಿರುವ ಸಾಮಾಜಿಕ, ಆಸ್ತಿಕ, ಪ್ರಸಾರ, ಪ್ರಯೋಜನ ಕಾರ್ಯಕ್ರಮಗಳನ್ನೂ ವಿವರಿಸಿದರು. ತಾನು ಇಲ್ಲಿಗೆ ಬರುತ್ತಿರುವುದು ಎರಡನೆಯ ಬಾರಿಯೆಂದೂ, (ಅವರು ಮಾರಿಷಸನ ಪ್ರಧಾನಿ ತಮ್ಮ ಪತಿ ಶ್ರೀಜಗನ್ನಾಥ್ ಅವರೊಡನೆ ಹಿಂದೊಮ್ಮೆ ಇಲ್ಲಿಗೆ ಬಂದಿದ್ದರು) ಪ್ರಪಂಚದಲ್ಲಿ ಎಷ್ಟೋ ಸ್ಥಳಗಳನ್ನು ತಾನು ನೋಡಿರುವುದಾಗಿಯೂ, ಆದರೆ ಈ ಸ್ಥಳ ತನಗೆ ಬಹುಹಿಡಿಸಿದೆಯೆಂದೂ ಆಕೆ ನುಡಿದರು.

## ತಿರುಚಾನೂರಿನಲ್ಲಿ ಯಶಸ್ವಿ ಪಂಚಮೀ ತೀರ್ಥ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದವು. ಪಂಚಮೀ ತೀರ್ಥ ಸಂದರ್ಭಕ್ಕಾಗಿ ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ಆಲಯದಿಂದ ಸ್ವಾಮಿಯ ಉಡುಗೊರೆಯಾದ ಅರಿಶಿಣ, ಕುಂಕುಮ, ರೇಷ್ಮೆ ವಸ್ತ್ರ ಮೊದಲಾದ ಮಂಗಳ ವಸ್ತುಗಳನ್ನು ಒಪ್ಪಿಸಲಾಯಿತು. ತದನಂತರ ಸಹಸ್ರಾರು ಮಂದಿ ಭಕ್ತರ ಭಾವಹಿಸುವಿಕೆಯಲ್ಲಿ ಪಂಚಮೀತೀರ್ಥ ಭವ್ಯವಾಗಿ ನಡೆಯಿತು.

( 7 ನೆ ಪುಟ ನೋಡಿ)

# ಸಂಪಾದಕೀಯ

ಕಾಲ ಅನಂತವೂ ಪೃಥ್ವಿ ವಿಪುಲ ಆದರೂ ಸಹ ನಶ್ವರವಾದ ಮಾನವನ ಬಾಳಿನಲ್ಲಿ ಆ ಬಾಳಿನದೇ ಒಂದು ಲೆಕ್ಕವಾಗಿ, ತಾನು ಬರುವ ಮೊದಲಿದ್ದಂತೆಯೇ ಜಗತ್ತು ತಾನು ಹೋದ ಮೇಲೂ ಇರುತ್ತದೆ ಎಂಬುದು ಆವನಿಗೆ ತುಸು ಅಸಮಾಧಾನಕರವೇ. ಹಾಗಾಗಿ ಇರುವುದನ್ನು – ಇದ್ದದ್ದನ್ನು – ಇನ್ನೂ ಉತ್ತಮಗೊಳಿಸುವತ್ತ ಮನುಷ್ಯ ಅನುಕ್ಷಣವೂ ಪ್ರಯತ್ನ ಪಡುತ್ತಲೇ ಇರುತ್ತಾನೆ. ಈ ಉತ್ತಮಗೊಳಿಸುವ ಯತ್ನ ವ್ಯಕ್ತಿ ಮೂಲವಾಗಿ – ಸ್ವಾರ್ಥ ಮೂಲವಾಗಿ ಇದ್ದಾಗ ಅದನ್ನು ಜಗತ್ತು – ಸಮಾಜ ಪರಿಗಣಿಸದೆ ಹೋಗುತ್ತದೆ ಎಂಬುದೂ, ಪರಾರ್ಥ ಮೂಲವಾಗಿ ಇದ್ದಾಗ ಹಾಗೆ ಪ್ರಯತ್ನಪಟ್ಟವನನ್ನು ಯುಗಪುರುಷನೆಂದು ಗೌರವಿಸುತ್ತದೆ ಎಂಬುದೂ ಬಸವಣ್ಣ, ಶಂಕರ, ರಾಮಾನುಜ, ವಿವೇಕಾನಂದ ಗಾಂಧಿಯಂತಹವರ ಉದಾಹರಣೆಗಳಿಂದ ಸ್ಪಷ್ಟ.

ಹಾಗೆಯೇ ಸಂಸ್ಥೆಗಳೂ ಸಹ, ಗುಪ್ತ ಸಾಮ್ರಾಜ್ಯ, ಚಾಲುಕ್ಯರು, ನಲಂದಾ, ಕಾಶೀ ಮೊದಲಾದವು.

ಮನುಷ್ಯನ ಆಯುಃ ಪ್ರಮಾಣದ ಗರಿಷ್ಠ ಮಿತಿಯನ್ನು ಸಾಧಾರಣವಾಗಿ ನೂರು ವರ್ಷ ಎಂದುಕೊಂಡು ಈ ಅವಧಿಯಲ್ಲಿ ಆತ ಮಾಡಿದ ಲೋಕಹಿತ ಪ್ರಯತ್ನಗಳನ್ನು ಗುರುತಿಸಲು ಆಗಾಗ ಪ್ರಯತ್ನ ಪಡುವುದು ಸಹಜ. ಎಂತಲೇ ಹುಟ್ಟು ಹಬ್ಬ, ಷಷ್ಟಿ ಪೂರ್ತಿ, ಕನಕಾಭಿಷೇಕ ಎಲ್ಲವೂ. ಹೀಗೆಯೇ ಸಂಸ್ಥೆಗಳ ವಿಷಯದಲ್ಲೂ ಸಹ, ರಜತ ಮಹೋತ್ಸವ ಸ್ವರ್ಣಮಹೋತ್ಸವ ಇತ್ಯಾದಿ. ವ್ಯಕ್ತಿಗಳ ವಿಷಯದಲ್ಲಿ ಷಷ್ಟಿ ಪೂರ್ತಿ, ಕನಕಾಭಿಷೇಕ ಮೊದಲಾದವು ವ್ಯಕ್ತಿ ಇನ್ನು ವಿಶ್ರಾಂತನಾಗಿ ತನ್ನ ಸಾಧನೆಯ ಫಲವನ್ನು ಅನುಭವಿಸುತ್ತ ಕಳೆಯಬಹುದೆಂಬುದನ್ನು ಸೂಚಿಸುವುದಾದರೆ, ಸಂಸ್ಥೆಗಳ ವಿಷಯದಲ್ಲಿ ಅವು ನಡೆದು ಬಂದ ಹಾದಿಯನ್ನು ಒಮ್ಮೆ ನಿರುಕಿಸಿ, ಸಾಧನೆಯ ಸಾಫಲ್ಯ ವೈಫಲ್ಯಗಳನ್ನು ಗುರುತಿಸಿಕೊಂಡು ಮತ್ತೂ ಮುಂದುವರೆಯುವ ಹೊಸ ಉತ್ಸಾಹವನ್ನು ಹೊಂದುವ ಒಂದು ಅವಕಾಶ ಎನ್ನಬೇಕು. (ಗುರಿ ಎನ್ನುವುದು ಸೇರಿದಂತೆ ದೂರವಾಗುವ ವಿಷಯವಲ್ಲವೇ !) ಇಂತಲ್ಲಿ ತಿ. ತಿ. ದೇ ಆಡಳಿತವ್ಯವಸ್ಥೆ ಆರಂಭವಾಗಿ ಐವತ್ತು ವರ್ಷಗಳಾಗಿವೆ.

ಶ್ರೀ ವೆಂಕಟೇಶ್ವರ ಸ್ವಾಮಿ ಅನಾದಿ ಅನಂತನೇ ಆದರೂ ಅವನ ಸೇವೆ ಮಾಡುವ ಮಾನವರು, ಮಾನವ ಸಂಸ್ಥೆಗಳು ಕಾಲದಿಂದ ಕಾಲಕ್ಕೆ ಬದಲಾಗಿವೆ. ಈಸ್ಟ್ ಇಂಡಿಯಾ ಕಂಪನಿಯವರಿಗೆ ಮೊದಲು ನೆಲವನ್ನು ಆಳುವ ರಾಜರೇ ದೇವಾಲಯದ ಸೇವಾಡಳಿತಕ್ಕೂ ಹೊಣೆಯಾಗಿದ್ದರಾದರೂ, ಕಂಪನಿ ರಾಜ್ಯಭಾರದಲ್ಲಿ ಅದು ಮಹಂತರಿಗೆ ಒಪ್ಪಿಸಲ್ಪಟ್ಟು, 1933 ರಲ್ಲಿ ಆಂಗ್ಲ ಸರ್ಕಾರ ಅದನ್ನು ಮಹಂತರಿಂದ ಹಿಂತೆಗೆದುಕೊಂಡು ತಿ. ತಿ. ದೇವಸ್ಥಾನಗಳ ಅಧಿನಿಯಮವೊಂದನ್ನು ಹೊರಡಿಸುವುದರ ಮೂಲಕ ಒಂದು ಟ್ರಸ್ಟ್‌ಬೋರ್ಡ್‌ಗೆ ಸೇವಾಡಳಿತದ ಅಧಿಕಾರವನ್ನು ವಹಿಸಿಕೊಟ್ಟಿತು. ಭಾರತದ ಸ್ವಾತಂತ್ರ್ಯಾನಂತರ ಈ ಅಧಿನಿಯಮವನ್ನು ತುಸು ವ್ಯತ್ಯಾಸಗೊಳಿಸಿದರೂ ಸಹ ಮೂಲಸೂತ್ರವಾದ ಟ್ರಸ್ಟ್ ಬೋರ್ಡ್‌ನ ಸೇವಾಡಳಿತ ವ್ಯವಸ್ಥೆಗೇನೂ ಕೊರತೆಯುಂಟಾಗಲಿಲ್ಲ. ಕಾಲದಿಂದ ಕಾಲಕ್ಕೆ ಹೊಸ ಹೊಸ ಸದಸ್ಯರಿಂದ ಟ್ರಸ್ಟ್ ಬೋರ್ಡ್ ಶ್ರೀ ವೆಂಕಟೇಶ್ವರ ಸ್ವಾಮಿಯ ಹಾಗೂ ಮತ್ತಿತರ ದೇವಾಲಯಗಳ ಸೇವೆಯಲ್ಲಿ, ಅಲ್ಲಿಗೆ ಬರುವ ಯಾತ್ರಿಕರ ಅಗತ್ಯಗಳನ್ನು ಪೂರೈಸುವುದರಲ್ಲಿ, ಹೊಸ ಹೊಸ ರಚನಾತ್ಮಕ ಕಾರ್ಯಕ್ರಮಗಳಿಂದ ಕ್ರಿಯಾತ್ಮಕವಾಗಿ ಭಾಗವಹಿಸುತ್ತ, ಶ್ರೀ ವೆಂಕಟೇಶ್ವರಸ್ವಾಮಿಯ ಆಧ್ಯಾತ್ಮಿಕ ಸಾಮ್ರಾಜ್ಯದ ಸೇನಾನಿಗಳಂತೆ ಮಂತ್ರಿಗಳಂತೆ ಕೆಲಸ ನಿರ್ವಹಿಸುತ್ತ ಬಂದಿರುವುದು ತಿ. ತಿ. ದೇವಸ್ಥಾನಗಳ ಪ್ರಗತಿಯನ್ನು ಗಮನಿಸಿದರೆ ಮನದಟ್ಟಾಗುವ ಅಂಶ.

ಧರ್ಮಾಭಿವೃದ್ಧಿ, ರಾಷ್ಟ್ರಾಭಿವೃದ್ಧಿಗಳಲ್ಲಿ ತಿ. ತಿ. ದೇವಸ್ಥಾನಗಳು ತನ್ನ ಆಡಳಿತ ವ್ಯವಸ್ಥೆಯ ಅನುಸಾರ ಭಾಗವಹಿಸುತ್ತ ಐವತ್ತು ವರ್ಷ ಕಳೆದನಂತರ ಇದೇ ಫೆಬ್ರವರಿಯಲ್ಲಿ ಸ್ವರ್ಣಮಹೋತ್ಸವವನ್ನು ಆಚರಿಸುತ್ತಿದೆ; ತಾನು ನಡೆದು ಬಂದ ಹಾದಿಯನ್ನು ಒಮ್ಮೆ ಸಿಂಹಾವಲೋಕನ ಮಾಡಲು ಹಾಗೂ ಮುಂದೆ ನಡೆಯಬೇಕಾದ ಹಾದಿಯ ಬಗ್ಗೆ ನಿರ್ಣಯಗಳನ್ನು ಹೊಂದಲು. ಇಂತಲ್ಲಿ ಶ್ರೀವೆಂಕಟೇಶ್ವರ ಸ್ವಾಮಿಯ ಅನುಗ್ರಹ ಅತ್ಯಗತ್ಯ. ಆತನ ಸೇವೆ ಮಾಡುವ ಶಕ್ತಿಯನ್ನೂ ಮನವನ್ನೂ ಆತನೇ ಕೊಟ್ಟು ಸೇವೆ ಮಾಡಿಸಿಕೊಳ್ಳಲಿ ಎಂಬುದಾಗಿ ಹಾರೈಸುವ.

( ಮುಂದುವರೆದದ್ದು )

ಅಹಂ ಕ್ರತುರಹಂ ಯಜ್ಞಃ
ಸ್ವಧಾಽಹಮಹಮೌಷಧಮ್ ।
ಮಂತ್ರೋಽಹಮಹಮೇವಾಜ್ಯಂ
ಅಹಮಗ್ನಿರಹಂಹುತಮ್ ॥ 16

ಯಾಗವೂ ನಾನೆ; ಯಜ್ಞವೂ ನಾನೆ. ಪಿತೃಗಳಿಗೆ ಕೊಡುವ ಅನ್ನವೂ ನಾನೆ. ಎಲ್ಲರೂ ಉಣ್ಣುವ ಅನ್ನವೂ ನಾನೆ. ಮಂತ್ರವೂ ನಾನೆ. ತುಪ್ಪವೂ ನಾನೆ. ಅಗ್ನಿಯೂ ನಾನೆ. ಆಹುತಿಯೂ ನಾನೇ.

ಪಿತಾಽಹಮಸ್ಯ ಜಗತೋ
ಮಾತಾ ಧಾತಾ ಪಿತಾಮಹಃ ।
ವೇದ್ಯಂ ಪವಿತ್ರಮೋಂಕಾರ
ಋಕ್ಸಾಮ ಯಜುರೇವ ಚ ॥ 17

ಈ ಜಗತ್ತಿನ ತಂದೆಯೂ ನಾನೆ, ತಾಯಿಯೂ ನಾನೆ, ಧಾರಕನೂ ನಾನೆ, ಅಜ್ಜನೂ ನಾನೆ, ತಿಳಿಯಬೇಕಾದಪವಿತ್ರ ತತ್ತ್ವವೂ ನಾನೆ, ಓಂಕಾರವೂ ನಾನೆ, ಋಕ್, ಸಾಮ, ಯಜುರ್– ಎಂಬ ವೇದಗಳೂ ನಾನೆ.

ಗತಿರ್ಭರ್ತಾ ಪ್ರಭುಸ್ಸಾಕ್ಷೀ
ನಿವಾಸಶ್ಶರಣಂ ಸುಹೃತ್ ।
ಪ್ರಭವಃ ಪ್ರಲಯಃ ಸ್ಥಾನಂ
ನಿಧಾನಂ ಬೀಜಮವ್ಯಯಮ್ ॥ 18

ಮುಕ್ತರಿಗೆ ಗಮ್ಯನೂ ನಾನೆ, ಕಾಪಾಡುವವನೂ ನಾನೆ, ಒಡೆಯನೂ ನಾನೆ, ಎಲ್ಲವನ್ನೂ ನೋಡುತ್ತಿರುವ ಸಾಕ್ಷಿ ನಾನೆ, ಎಲ್ಲರ ವಾಸಸ್ಥಾನ, ಮರೆಹೊಕ್ಕವರಿಗೆ ಆಸರೆ, ಪ್ರೀತಿಯ ಗೆಳೆಯ, ಜಗತ್ತಿನ ಹುಟ್ಟು ಸಾವು ಮತ್ತು ಇರುವಿಕೆಗೆ ಕಾರಣ, ಸಂಹಾರದಲ್ಲಿ ಎಲ್ಲವನ್ನು ಒಡಲಲ್ಲಿ ಹೊತ್ತವನು, ಸೃಷ್ಟಿಯಲ್ಲಿ ಅಕ್ಷಯಬೀಜವಾಗಿ ಬಿತ್ತಿದವನು – ಎಲ್ಲ ನಾನೆ.

ತಪಾಮ್ಯಹಮಹಂ ವರ್ಷಂ
ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ
ಸದಸಚ್ಚಾಹಮರ್ಜುನ ॥ 19

ಅರ್ಜುನ, ನಾನು ಬಿಸಿಲಾಗಿ ಸುಡುತ್ತೇನೆ; ಮಳೆಯನ್ನು ತಡೆ ಹಿಡಿಯುತ್ತೇನೆ ಮತ್ತು ಸುರಿಸುತ್ತೇನೆ; ಸಾವಿಲ್ಲದಿರುವಿಕೆಯಾಗಿದ್ದೇನೆ; ಸಾವೂ ಆಗಿದ್ದೇನೆ; ಕಾರ್ಯ ಕಾರಣಾತ್ಮಕವಾದ ಜಗವೆಲ್ಲ ನಾನೇ ತುಂಬಿದ್ದೇನೆ.

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇದ್ರಲೋಕಂ
ಅಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥

# ಶ್ರೀಮದ್ಭಗವದ್ಗೀತೆ

## ಹೆಚ್ಚಿನ ತಿಳಿವಳಿಕೆ

### ೯ ನೆಯ ಅಧ್ಯಾಯ

ಸೋಮಪಾನದಿಂದ ಪಾಪವನ್ನು ತೊಳೆದುಕೊಂಡ ಕರ್ಮಠರಾದ ವೇದಜ್ಞರು ಯಜ್ಞಗಳಿಂದ ಪೂಜಿಸಿ ಸ್ವರ್ಗವನ್ನು ಬಯಸುತ್ತಾರೆ. ಅವರು ಸುಖಕರವಾದ ಇಂದ್ರಲೋಕಕ್ಕೆ ಹೋಗಿ ಸ್ವರ್ಗದಲ್ಲಿ ದಿವ್ಯವಾದ ದೇವತೆಗಳ ಸುಖಗಳನ್ನು ಅನುಭವಿಸುತ್ತಾರೆ.

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ॥ 21

ಅವರು ವಿಶಾಲವಾದ ಆ ಸ್ವರ್ಗಲೋಕವನ್ನು ಅನುಭವಿಸಿ ಪುಣ್ಯವು ಮುಗಿಯುತ್ತಲೇ ಭೂಮಿಗೆ ಬರುವರು. ಹೀಗೆ ಫಲಾಪೇಕ್ಷೆಯಿಂದ ವೈದಿಕ ಕರ್ಮಗಳನ್ನು ಮಾಡುವವರು ಮತ್ತೆ ಮತ್ತೆ ಸ್ವರ್ಗಕ್ಕೆ ಹೋಗಿ ಭೂಮಿಗೆ ಮರಳುತ್ತಿರುತ್ತಾರೆ

ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಮ್ ॥ 22

ಯಾರು ಅನನ್ಯ ಭಕ್ತಿಯಿಂದ ನನ್ನನ್ನೇ ನೆನೆಯುತ್ತ ನನ್ನ ಗುಣದ ಗರಿಮೆಯನ್ನು ಉಪಾಸನೆ ಮಾಡುವರೋ, ಎಲ್ಲ ಬಗೆಯಿಂದಲೂ ನನ್ನನ್ನೇ ನಂಬಿರುವ ಅವರ ಯೋಗಕ್ಷೇಮದ ಹೊಣೆಯನ್ನು ನಾನು ಹೊರುತ್ತೇನೆ.

ಯೇಽಪ್ಯನ್ಯದೇವತಾಭಕ್ತಾ
ಯಜಂತೇ ಶ್ರದ್ಧಯಾಽನ್ವಿತಾಃ ।
ತೇಽಪಿ ಮಾಮೇವ ಕೌಂತೇಯ
ಯಜಂತ್ಯವಿಧಿಪೂರ್ವಕಮ್ ॥ 23

ಅರ್ಜುನ, ಯಾರು ಬೇರೆ ದೇವತೆಗಳ ಭಕ್ತರಾಗಿ ಶ್ರದ್ಧೆಯಿಂದ ಪೂಜಿಸುತ್ತಾರೋ ಅವರು ಕೂಡ ತಮಗೆ ತಿಳಿಯದೆ ನನ್ನನ್ನೇ ಪೂಜಿಸುತ್ತಾರೆ.

ಅಹಂ ಹಿ ಸರ್ವಯಜ್ಞಾನಾಂ
ಭೋಕ್ತಾ ಚ ಪ್ರಭುರೇವ ಚ ।



ನ ತು ಮಾಮಭಿಜಾನಂತಿ
ತತ್ತ್ವೇನಾತಶ್ಚ್ಯವಂತಿ ತೇ ॥ 24

ನಾನೆ ಎಲ್ಲ ಯಜ್ಞಗಳ ಹವಿರ್ಭಾಗವನ್ನುಣುವವನು ಮತ್ತು ಫಲವನ್ನು ಕೊಡುವವನು ಅವರು ನನ್ನನ್ನು ಯಥಾವತ್ತಾಗಿ ತಿಳಿಯುವುದಿಲ್ಲ, ಆದ್ದರಿಂದ ಜಾರಿ ಬೀಳುತ್ತಾರೆ.

ಯಾಂತಿ ದೇವವ್ರತಾ ದೇವಾನ್
ಪಿತೄನ್ಯಾಂತಿ ಪಿತೃವ್ರತಾಃ ।
ಭೂತಾನಿ ಯಾಂತಿ ಭೂತೇಜ್ಯಾ
ಯಾಂತಿ ಮದ್ಯಾಜಿನೋಽಪಿ ಮಾಮ್ ॥ 25

ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಪಡೆಯುತ್ತಾರೆ. ಪಿತೃಗಳನ್ನು ಪೂಜಿಸುವವರು ಪಿತೃಗಳನ್ನು ಪಡೆಯುತ್ತಾರೆ. ಭೂತಗಳನ್ನು ಪೂಜಿಸುವವರು ಭೂತಗಳನ್ನು ಪಡೆಯುತ್ತಾರೆ. ನನ್ನನ್ನು ಪೂಜಿಸುವವರು ನನ್ನನ್ನೇ ಪಡೆಯುತ್ತಾರೆ.

ಪತ್ರಂ ಪುಷ್ಪಂ ಫಲಂ ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಂ
ಅಶ್ನಾಮಿ ಪ್ರಯತಾತ್ಮನಃ ॥ 26

ಎಲೆ, ಹೂ ಹಣ್ಣು, ನೀರು-ಇವುಗಳನ್ನು ಯಾವನು ನನಗೆ ಪ್ರೇಮದಿಂದ ಕೊಡುತ್ತಾನೋ, ಅಂಥವನು ನನ್ನಲ್ಲಿ ಮನಸ್ಸು ನೆಟ್ಟು ಭಕ್ತಿಯಿಂದ ನೀಡಿದ ಅದನ್ನು ನಾನು ತೆಗೆದುಕೊಳ್ಳುತ್ತೇನೆ.

ಯತ್ಕರೋಷಿ ಯದಶ್ನಾಸಿ
ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ
ತತ್ಕುರುಷ್ವ ಮದರ್ಪಣಮ್ ॥ 27

ಅರ್ಜುನ, ಏನನ್ನು ಮಾಡುತ್ತಿಯೋ, ಏನನ್ನು ಉಣ್ಣುತ್ತಿಯೋ, ಏನನ್ನು ಹೋಮ ಮಾಡುತ್ತಿಯೋ, ಯಾವ ತಪಸ್ಸನ್ನು ಮಾಡುತ್ತಿಯೋ ಅದನ್ನು ನನಗೆ ಒಪ್ಪಿಸಿಬಿಡು.

ಶುಭಾಶುಭಫಲೈರೇವಂ
ಮೋಕ್ಷ್ಯಸೇ ಕರ್ಮಬಂಧನೈಃ ।
ಸನ್ಯಾಸಯೋಗಯುಕ್ತಾತ್ಮಾ
ವಿಮುಕ್ತೋ ಮಾಮುಪೈಷ್ಯಸಿ ॥ 28

ಹೀಗೆ ಮಾಡಿದರೆ ಪಾಪ ಪುಣ್ಯದ ಫಲಗಳಿಂದ ಬಂಧಿಸುವ ಕರ್ಮದ ಕಟ್ಟುಗಳಿಂದ ಬಿಡುಗಡೆ ಹೊಂದುತ್ತಿ; ಫಲದ ಅಪೇಕ್ಷೆಯಿರದೆ ಕರ್ತವ್ಯ ದೃಷ್ಟಿಯಿಂದ ಕರ್ಮವನ್ನು ಮಾಡುವವನಾಗಿ ಮೋಕ್ಷವನ್ನು ಪಡೆಯುತ್ತಿ.

ಸಮೋಽಹಂ ಸರ್ವಭೂತೇಷು
ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ
ಮಯಿ ತೇ ತೇಷು ಚಾಪ್ಯಹಮ್ ॥ 29

ಎಲ್ಲಾ ಪ್ರಾಣಿಗಳಲ್ಲಿಯೂ ನಾನು ಒಂದೇ ರೀತಿ ಇರುವೆನು. ನನಗೆ ಬೇಡವಾದವನೂ ಇಲ್ಲ; ಬೇಕಾದವನೂ ಇಲ್ಲ. ಯಾರು ನನ್ನನ್ನು ಪ್ರೇಮದಿಂದ ಆಶ್ರಯಿಸುತ್ತಾರೋ ಅವರು ನನ್ನಲ್ಲಿರುತ್ತಾರೆ. ನಾನು ಅವರಲ್ಲಿ (ಅವರ ವಶನಾಗಿ) ಇರುವೆನು.

ಅಪಿ ಚೇತ್ಸು ದುರಾಚಾರೋ
ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ
ಸಮ್ಯಗ್ವ್ಯವಸಿತೋ ಹಿ ಸಃ ॥ 30

ಬಹು ಕೆಟ್ಟ ನಡವಳಿಕೆಯವನಾಗಿದ್ದರೂ ಯಾವನು ನನ್ನನ್ನು ನೀನೇ ಗತಿಯೆಂದು ಉಪಾಸನೆ ಮಾಡುವನೋ ಅವನು ಒಳ್ಳೆ ನಡವಳಿಕೆಯವನೇ ಎಂದು ತಿಳಿಯಬೇಕು. ಏಕೆಂದರೆ ಅವನ ನಿಶ್ಚಯವು ಒಳ್ಳೆಯದು.

ಕ್ಷಿಪ್ರಂ ಭವತಿ ಧರ್ಮಾತ್ಮಾ
ಶಶ್ವಚ್ಛಾಂತಿಂ ನಿಗಚ್ಛತಿ !
ಕೌಂತೇಯ ಪ್ರತಿಜಾನೀಹಿ
ನಮೇ ಭಕ್ತಃ ಪ್ರಣಶ್ಯತಿ ॥ 31

ಅವನು ಬಹುಬೇಗ ಧರ್ಮದ ಮನಸ್ಸುಳ್ಳವನಾಗುತ್ತಾನೆ ಮತ್ತು ಶಾಶ್ವತವಾದ ಶಾಂತಿಯನ್ನು ಪಡೆಯುತ್ತಾನೆ; ಅರ್ಜುನ, ನನ್ನ ಭಕ್ತನು ಕೆಡುವುದಿಲ್ಲವೆಂದು ಆಣೆಯಿಟ್ಟು ಸಾರುವೆನು.

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ
ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ
ತೇಽಪಿ ಯಾಂತಿ ಪರಾಂ ಗತಿಮ್ ॥ 32

ಅರ್ಜುನ, ಪಾತಕಿಗಳಾದವರೂ ಹೆಂಗಸರೂ ವೈಶ್ಯರೂ ಶೂದ್ರರೂ ಕೂಡ ನನ್ನನ್ನು ಮೊರೆಹೊಕ್ಕು ಉತ್ತಮವಾದ ಗತಿಯನ್ನೇ ಹೊಂದುತ್ತಾರೆ.

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ
ಭಕ್ತಾ ರಾಜರ್ಷಯಸ್ತಥಾ ।
ಅನಿತ್ಯಮಸುಖಂ ಲೋಕಮಿಮಂ
ಪ್ರಾಪ್ಯ ಭಜಸ್ವ ಮಾಮ್ ॥ 33

ಒಳ್ಳೇ ದಾರಿಯಲ್ಲಿರುವಂಥ ಬ್ರಾಹ್ಮಣರ ಮತ್ತು ರಾಜರ್ಷಿಗಳ ಮಾತೇನು? ಮೂರು ಗಳಿಗೆಯ ಬಾಳಿನದಾಗಿ ಸುಖವಿಲ್ಲದ ಈ ಭೂಮಿಯಲ್ಲಿ ಹುಟ್ಟಿ ನನ್ನನ್ನು ಸೇವಿಸು.

ಮನ್ಮನಾ ಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಂ
ಆತ್ಮಾನಂ ಮತ್ಪರಾಯಣಃ ॥ 34

ನನ್ನಲ್ಲಿ ಮನಸ್ಸನ್ನಿಡು; ನನ್ನ ಭಕ್ತನಾಗು ; ನನ್ನನ್ನು ಪೂಜಿಸು, ನನ್ನ ಕಾಲಿಗೆ ಬೀಳು. ಹೀಗೆ ನನ್ನನ್ನೇ ಗತಿ ಎಂದು ತಿಳಿದು ಮನಸ್ಸನ್ನು ಉಪಾಸನೆಯಲ್ಲಿ ತೊಡಗಿಸಿದರೆ ನನ್ನನ್ನೇ ಪಡೆಯುತ್ತಿ.

ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನಕರ್ಮಸನ್ಯಾಸಯೋಗೋ
ನಾಮ ನವಮೋಽಧ್ಯಾಯಃ ॥

ಇತಿ

9 ನೆಯ ಅಧ್ಯಾಯವು ಮುಗಿದುದು.

★

# ಶ್ರೀ ರಾಮಾನುಜರ ನಂತರದ ಆಚಾರ್ಯ ಪೀಠಗಳು

ಶ್ರೀ ಭಗವದ್ರಾಮಾನುಜರು ಕ್ರಿ. ಶ. ೧೦೧೭ ರಲ್ಲಿ ಅವತರಿಸಿ ೧೨೦ ವರ್ಷಗಳ ಕಾಲ ಜೀವಿಸಿದ್ದು ಶ್ರೀ ಯಾಮುನಾಚಾರ್ಯರಿಂದ ಸ್ಥಾಪಿತವಾದ ವಿಶಿಷ್ಟಾದ್ವೈತತತ್ತ್ವವನ್ನು ಪ್ರತಿಪಾದಿಸಿದರು. ಯಾಮುನರು ತಮ್ಮ ಸಿದ್ಧಾಂತ ಪ್ರತಿಪಾದನೆಗಾಗಿ 'ಸಿದ್ಧಿತ್ರಯ', 'ಆಗಮ ಪ್ರಾಮಾಣ್ಯ', 'ಗೀತಾರ್ಥಸಂಗ್ರಹ', 'ಮಹಾಪುರುಷನಿರ್ಣಯ' ಮತ್ತು 'ಸ್ತೋತ್ರರತ್ನ' ಎಂಬ ಗ್ರಂಥಗಳನ್ನು ರಚಿಸಿದರು. ಆತ್ಮಸಿದ್ಧಿ, ಈಶ್ವರಸಿದ್ಧಿ ಮತ್ತು ಸಂವಿತ್ಸಿದ್ಧಿ ಎಂಬ ಮೂರುಭಾಗವುಳ್ಳ 'ಸಿದ್ಧಿತ್ರಯ'ದಲ್ಲಿ ಜೀವಾತ್ಮಪರಮಾತ್ಮರ ಸಂಬಂಧವನ್ನು ನಿರೂಪಣೆ ಮಾಡಿ ಅದ್ವೈತಸಿದ್ಧಾಂತವನ್ನು ಖಂಡಿಸಿದ್ದಾರೆ. ಶ್ರೀ ಶಂಕರರ ಖಂಡನೆಯನ್ನು ಖಂಡಿಸಿ ಭಾಗವತ ಮತ್ತು ಪಾಂಚರಾತ್ರಾಗಮಗಳ ಪ್ರಾಮಾಣ್ಯವನ್ನು ಸ್ಥಾಪಿಸುವುದು 'ಆಗಮ ಪ್ರಾಮಾಣ್ಯ'. ಕರ್ಮಜ್ಞಾನಯೋಗಗಳಿಗಿಂತ ಭಕ್ತಿಯೋಗಕ್ಕೆ ಹೆಚ್ಚುಸ್ಥಾನವನ್ನು ಕಲ್ಪಿಸಿ ಗೀತಾರ್ಥವನ್ನು ಸಂಗ್ರಹಮಾಡಿರುವುದು 'ಗೀತಾರ್ಥಸಂಗ್ರಹ'.

ಶ್ರೀ ರಾಮಾನುಜರು ಸಿದ್ಧಾಂತಸ್ಥಾಪನೆಗಾಗಿ 'ಶ್ರೀಭಾಷ್ಯ' 'ವೇದಾಂತಸಾರ' 'ವೇದಾಂತದೀಪ', 'ವೇದಾರ್ಥಸಂಗ್ರಹ', 'ಭಗವದ್ಗೀತಾಭಾಷ್ಯ', 'ಗದ್ಯತ್ರಯ', 'ನಿತ್ಯ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. 'ಶ್ರೀಭಾಷ್ಯ'ವು ಬ್ರಹ್ಮಸೂತ್ರದ ವ್ಯಾಖ್ಯಾನ. 'ವೇದಾಂತಸಾರ' ಮತ್ತು 'ವೇದಾಂತದೀಪ'ಗಳು ಅದೇ ಬ್ರಹ್ಮಸೂತ್ರದ ಸಂಗ್ರಹವ್ಯಾಖ್ಯಾನಗಳು. ಇವುಗಳಲ್ಲಿ ರಾಮಾನುಜರು ಶಂಕರರು ಉಪಯೋಗಿಸಿಕೊಂಡಿದ್ದ ಪ್ರಸ್ಥಾನತ್ರಯಗಳ ಆಧಾರದ ಮೇಲೆಯೇ ಶಾಂಕರಸಿದ್ಧಾಂತವನ್ನು ನಿರಾಕರಣೆ ಮಾಡಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದನೆ ಮಾಡಿದ್ದಾರೆ. ಇವರ 'ಶ್ರೀಭಾಷ್ಯ'ಕ್ಕೆ ಮೇಘನಾದಾರಿಯವರ 'ನ್ಯಾಯಪ್ರಕಾಶಿಕ' ಮತ್ತು 'ಭಾಷ್ಯಭಾವಬೋಧನ', ವರದನಾರಾಯಣಭಟ್ಟರ 'ನ್ಯಾಯಸುದರ್ಶನ', ಸುದರ್ಶನಸೂರಿಗಳ 'ಶ್ರುತಪ್ರಕಾಶಿಕಾ' ಮತ್ತು 'ಶ್ರುತದೀಪಿಕಾ', ವೇದಾಂತಾಚಾರ್ಯರ 'ತತ್ತ್ವಟೀಕಾ', ಮತ್ತು ರಂಗರಾಮಾನುಜಮುನಿಗಳ 'ಮೂಲಭಾಷ್ಯಪ್ರಕಾಶಿಕಾ' ಎಂಬ ವ್ಯಾಖ್ಯಾನಗಳಿವೆ.

ರಾಮಾನುಜಸಿದ್ಧಾಂತದ ಪ್ರಕಾರ ಜೀವಾತ್ಮ, ಪರಮಾತ್ಮ, ಪ್ರಕೃತಿ – ಈ ಮೂರೂ (ಚಿತ್, ಅಚಿತ್ ಮತ್ತು ಈಶ್ವರ) ಸತ್ಯ. ಉಪನಿಷತ್ತಿನಲ್ಲಿ ಉಕ್ತವಾಗಿರುವ ಭೇದ, ಅಭೇದ ಮತ್ತು ಘಟಕ ಶ್ರುತಿಗಳೆಲ್ಲ ವಾಸ್ತವ. ಬ್ರಹ್ಮನೊಬ್ಬನೇ ಪರಮಸತ್ಯ. ಚೇತನಾಚೇತನಾತ್ಮಕವಾದ ಪ್ರಪಂಚವೆಲ್ಲ ಆತನ ಪ್ರಕಾರಗಳು ಮತ್ತು ರೂಪಗಳು. ಈ ರೂಪಗಳು ಪರಸ್ಪರ ಭಿನ್ನ. ಆದರೂ ತಮಗಿಂತ ಭಿನ್ನವಾದ ಪರಮಾತ್ಮನನ್ನು ವಿಶ್ಲೇಷಿಸುತ್ತವೆ. ಆದುದರಿಂದಲೇ ಈ ಸಿದ್ಧಾಂತಕ್ಕೆ ವಿಶಿಷ್ಟಾದ್ವೈತವೆಂದು ಹೆಸರು. ಸಕಲ ಜೀವಾತ್ಮವಸ್ತುಗಳಿಗೂ ಆವರಣವಾಗಿರುವ ಶರೀರಭೇದವೇ ವಿನಾ ಸ್ವರೂಪದಲ್ಲಿ ಯಾವ ಭೇದವೂ ಇಲ್ಲ. ಸಕಲಾಂಶಗಳಲ್ಲಿಯೂ ಸಕಲಾತ್ಮವಸ್ತುಗಳೂ ಅತ್ಯಂತ ಸಮವಾಗಿರುವುವು ಇಂತಹ ಆತ್ಮವಸ್ತುಗಳಿಗೂ ಪರಮಾತ್ಮನಿಗೂ ಕೆಲವು ವಿಷಯಗಳು ವಿನಾ ಉಳಿದ ವಿಷಯಗಳಲ್ಲೆಲ್ಲಾ ಅತ್ಯಂತ ಸಾಮ್ಯವಿರುವುದು. ಇದು ಸಾಮ್ಯದರ್ಶನಪರಾಕಾಷ್ಠೆ ಈ ಅಭಿಪ್ರಾಯದ ಪ್ರಕಾರ ಪ್ರತಿಜೀವಾತ್ಮನೂ ಪರಮಾತ್ಮನ ಸಾಮ್ಯವೆಂಬ ಪರಮಪುರುಷಾರ್ಥವನ್ನು ಪಡೆಯಬಹುದು. ಈ ಪುರುಷಾರ್ಥಪ್ರಾಪ್ತಿಗೆ ಪರಮಾತ್ಮನ ಪರಮಾನುಗ್ರಹವೇ ಮುಖ್ಯ ಕಾರಣವಾದುದರಿಂದ ಅದನ್ನು ಪಡೆಯಲು ಅನೇಕ ಸಾಧನಗಳಿವೆ. ಈ ಸಾಧನಗಳಿಂದ ಪ್ರತಿಜೀವಾತ್ಮನೂ ಜಾತಿ, ಕುಲ, ಗೋತ್ರ, ಪಕ್ಷಿ, ಮೃಗ ಭೇದವಿಲ್ಲದೆ ಮೋಕ್ಷವನ್ನು ಪಡೆಯಬಹುದು. ಪರಮಾತ್ಮನು ಪರಮಕರುಣಾನಿಧಿಯಾದುದರಿಂದ ಸರ್ವ ಜೀವಾತ್ಮರೂ ತನ್ನ ಪರಮಸಾಮ್ಯವನ್ನು ಹೊಂದಿ ಆನಂದದಲ್ಲಿರಬೇಕೆಂದು ಸರ್ವದಾ ಪ್ರತೀಕ್ಷಿಸುತ್ತಾ ಸೃಷ್ಟಿಸ್ಥಿತಿಸಂಹಾರ, ಅವತಾರ, ಉಪದೇಶ ಮೊದಲಾದ ವ್ಯಾಪಾರದಲ್ಲಿ ಸದಾ ನಿರತನಾಗಿರುವನು.

ಪ್ರಪಂಚವೂ ಸತ್ಯ. ಆತ್ಮಗಳೂ, ಪ್ರಕೃತಿಗಳೂ ಅನೇಕ ಆತ್ಮಗಳೂ ಅಣುವಿನಾಕಾರವುಳ್ಳವು. ಜೀವಾತ್ಮ ಮತ್ತು ಪ್ರಕೃತಿಗಳು ಪರಮಾತ್ಮನ ಶರೀರಗಳು. ಅವನಿಗಾಗಿಯೇ ಇರುವುವು. ಅವು ಶೇಷಗಳು. ಅವನು ಶೇಷಿ. ಜೀವಾತ್ಮ ಪರಮಾತ್ಮ ಸಂಬಂಧವು ಶರೀರಾತ್ಮ ಸಂಬಂಧದಂತವು.

**ಡಾ॥ ಎನ್. ಅನಂತರಂಗಾಚಾರ್**

ಮೋಕ್ಷವೆಂಬುದು ಮುಕ್ತಜೀವಿಗಳೊಡನಿರುವ ಆನಂದಸ್ಥಿತಿ. ಪರಮಪುರುಷನ ಕೈಂಕರ್ಯದಲ್ಲಿ ಆತ್ಮಗಳಿಗೆ ವಿಶೇಷ ಆನಂದವುಂಟಾಗುವುದು. ಲಕ್ಷ್ಮೀಸಮೇತನಾದ ವಿಷ್ಣುವೇ ಪರಬ್ರಹ್ಮ. ಒಂದು ಮತ್ತೊಂದಿಲ್ಲದೆ ಇರಲು ಸಾಧ್ಯವಿಲ್ಲ. ಭಕ್ತಿ ಪ್ರಪತ್ತಿಗಳೇ ಮೋಕ್ಷಕ್ಕೆ ಸಾಧನ. ಈ ಸಿದ್ಧಾಂತಸ್ಥಾಪನೆಗೆ ಪ್ರಸ್ಥಾನತ್ರಯಗಳೊಡನೆ ವೈಖಾನಸ, ಪಾಂಚರಾತ್ರಾಗಮಗಳೂ ಆಳ್ವಾರ್ರುಗಳ ನಾಲಾಯಿರ ಪ್ರಬಂಧಗಳೂ ಪ್ರಮಾಣಗ್ರಂಥಗಳು. ಆದುದರಿಂದಲೇ ಇದಕ್ಕೆ ಉಭಯವೇದಾಂತವೆಂದು ಹೆಸರು. ಪ್ರಬಂಧಗಳೂ ವೇದಗಳಷ್ಟೇ ಪ್ರಮಾಣವಾದುವು.

ಆದರೆ ಶ್ರೀ ರಾಮಾನುಜರವರೆಗಿನ ಯಾವ ಆಚಾರ್ಯರೂ ತಮಿಳಿನಲ್ಲಿ ಗ್ರಂಥರಚನೆ ಮಾಡಿಲ್ಲ. ಆಳ್ವಾರ್ರುಗಳನ್ನಾಗಲೀ ಪ್ರಬಂಧಗಳನ್ನಾಗಲೀ ಅನುವಾದ ಮಾಡಿಲ್ಲ. ಅವರ ಕಾಲಕ್ಕೆ ಅಂತಹ ರಚನೆಗಳ ಅವಶ್ಯಕತೆ ಕಂಡಿರಲಾರದು. ಆದರೂ ನಾಥಮುನಿಗಳಿಂದ ಹಿಡಿದು ರಾಮಾನುಜರವರೆಗಿನ ಆಚಾರ್ಯರುಗಳಿಗೆಲ್ಲ ಆಳ್ವಾರ್ರುಗಳಲ್ಲಿಯೂ ಅವರ ಉಕ್ತಿಗಳಲ್ಲಿಯೂ ವಿಶೇಷ ಪೂಜ್ಯತೆಯೂ ಗೌರವವೂ ಇದ್ದಿತೆಂಬುದಕ್ಕೆ ಸಂದೇಹವಿಲ್ಲ. ಯಾಮುನರು ಅದರ ಆವಶ್ಯಕತೆಯನ್ನು ಕಂಡು ತಮ್ಮ ಕಾಲದಲ್ಲಿ ಸಾಧ್ಯವಾಗದೆ ರಾಮಾನುಜರಿಗೆ ಸೂಚಿಸಿದರೆಂದೂ ಅದರಂತೆ ಅವರು ಗುರುಗಳ ಆದೇಶದಂತೆ ನಮ್ಮ ಶಿಷ್ಯರಾದ ಕುರುಕೇಶರಿಂದ 'ಆರಾಯಿರಪ್ಪಡಿ' ಎಂಬ ಪ್ರಬಂಧ ವ್ಯಾಖ್ಯಾನವನ್ನು ರಚಿಸಿ ಅದನ್ನು ಭಗವದ್ವಿಷಯವೆಂದು ಕರೆದರೆಂದೂ ಕತೆಯಿದೆ.

ರಾಮಾನುಜರು ತಮ್ಮ ಸಿದ್ಧಾಂತವನ್ನು ತಮ್ಮ ಕೃತಿ ಮತ್ತು ಪ್ರತ್ಯಕ್ಷ ಉಪದೇಶಗಳಿಂದ ರೂಢಮೂಲವನ್ನಾಗಿಸಿದರಲ್ಲದೆ ಅದರ ಮುಂದಿನ ಏಕರೀತಿಯಾದ ಅಭಿವೃದ್ಧಿಗೆ ಸೂಕ್ತಯೋಜನೆಗಳನ್ನೇರ್ಪಡಿಸಿದರು. ಅವರು ಕೇವಲ ದಾರ್ಶನಿಕರು ಮಾತ್ರವಾಗಿರದೆ ಕ್ರಿಯಾಶೀಲರೂ ವ್ಯವಹಾರಚತುರರೂ ಆಗಿದ್ದರು. ಅವರು ತಮ್ಮಿಂದ ಮುಂದೆ ತಮ್ಮ ಸಿದ್ಧಾಂತ ಪ್ರಚಾರಕ್ಕಾಗಿ ೭೪ ಜನ ಆಚಾರ್ಯರುಗಳನ್ನು ಸಿಂಹಾಸನಾಧಿಪತಿಗಳೆಂಬ ಹೆಸರಿನಿಂದ ನೇಮಿಸಿದರು. ದೇಶದ ಮೂಲೆ ಮೂಲೆಗಳಿಗೂ ಹೋಗಿ ತತ್ತ್ವಪ್ರಸಾರ ಮಾಡುವುದು ಅವರ

ಕಾರ್ಯವಾಗಿತ್ತು. ಪ್ರಚಾರ ಕಾರ್ಯದಲ್ಲಿ ಸಂಸ್ಕೃತಕ್ಕಿಂತ ದೇಶಭಾಷೆಯಾದ ದ್ರಾವಿಡ ಭಾಷೆಯು ಹೆಚ್ಚು ಪ್ರಯೋಜನಕಾರಿ ಎಂದು ಅವರಿಗೆ ಕಂಡಿರಬೇಕು. ಅವರು ತಮ್ಮ ಶಿಷ್ಯವರ್ಗದಲ್ಲಿ ಪಿಳ್ಳೈ ಉರಂಗವಿಲ್ಲಿದಾಸರಂತಹ ಅನೇಕ ಸಂಸ್ಕೃತ ತಿಳಿಯದವರನ್ನು ಅಳವಡಿಸಿಕೊಂಡಿದ್ದರು. ಆಚಾರ್ಯರಿಗೆ ಅಂತಹವರಲ್ಲಿ ವಿಶೇಷ ಸಹಾನುಭೂತಿಯೂ ಅನುಕಂಪವೂ ಇತ್ತು. ಅಂತಹವರಿಂದಲೇ ಪ್ರಚಾರಕಾರ್ಯ ಸುಲಭವೆಂಬ ರಹಸ್ಯವೂ ಅವರಿಗೆ ಅರಿವಾಗಿತ್ತು. ಅದಕ್ಕಾಗಿ ಅವರು ಬ್ರಾಹ್ಮಣೇತರರನೇಕರಿಗೆ ವೈಷ್ಣವಚಿಹ್ನೆಗಳಾದ ನಾಮ, ಪುಂಡ್ರ, ತಾಪ, ಮಂತ್ರಗಳನ್ನು ಅನುಗ್ರಹಿಸಿದರು. ಸಂಸ್ಕೃತ ಭಾಷೆಯು ಅಂತಹವರಿಗೆ ಕ್ಲಿಷ್ಟವಾದುದೆಂಬ ಭಯವೂ ಉಂಟಾಗಿರಬೇಕು. ಅದಕ್ಕಾಗಿಯೇ ತಾವು ನೇಮಿಸಿದ ೭೪ ಸಿಂಹಾಸನಾಧಿಪತಿಗಳಲ್ಲಿ ನಾಲ್ಕು ಜನರನ್ನು ಅಂದರೆ ಕುರುಕೇಶ, ಪ್ರಣತಾರ್ಥಿಹರ, ವರದವಿಷ್ಣು ಮೊದಲಾದವರನ್ನು ಭಾಷ್ಯಸಿಂಹಾಸನಾಧಿಪತಿಗಳಾಗಿಯೂ, ಕುರುಕೇಶರನ್ನು ಮಾತ್ರ ಭಾಷ್ಯ ಮತ್ತು ಪ್ರಬಂಧಗಳ ಉಭಯಸಿಂಹಾಸನಾಧಿಪತಿಗಳಾಗಿಯೂ, ಉಳಿದವರನ್ನೆಲ್ಲಾ ಪ್ರಬಂಧಸಿಂಹಾಸನಾಧಿಪತಿಗಳಾಗಿಯೂ ನೇಮಿಸಿದರು. ಪ್ರಬಂಧಸಿಂಹಾಸನಾಧಿಪತಿಗಳ ಸಂಖ್ಯೆ ವಿಶೇಷವಾಗಿದ್ದುದರಿಂದ ಆ ಶಾಖೆಯ ಪ್ರಚಾರ ಪ್ರಬಲವಾಯಿತು. ಅವರು ತಮ್ಮ ದೇಶಭಾಷಾ ಉಪನ್ಯಾಸಗಳಲ್ಲಿ ರಾಮಾನುಜರ ಹೃದಯ ವೈಶಾಲ್ಯವನ್ನೂ ದಲಿತವರ್ಗದವರಲ್ಲಿ ಅವರಿಗಿದ್ದ ಅನುಕಂಪವನ್ನೂ ಒತ್ತಿ ಹೇಳಿ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಜನಗಳಲ್ಲಿ ಆಕರ್ಷಣೆಯನ್ನುಂಟುಮಾಡಿದರು. ಸಾರ್ವಜನಿಕ ಜೀವನದಲ್ಲಿ ದೇವಾಲಯಾದಿ ಸಾರ್ವತ್ರಿಕಸಂಸ್ಥೆಗಳಲ್ಲಿ ಅಂತಹ ಶಿಷ್ಯರಿಗೆ ಹೆಚ್ಚು ಮನ್ನಣೆಯನ್ನು ದೊರಕಿಸಿದರು. ಮೇಲಾಗಿ ಇವರು ತಮಿಳು ಭಾಷೆಗೂ ದ್ರಾವಿಡ ಪ್ರಬಂಧಗಳಿಗೂ ಹೆಚ್ಚು ಪ್ರಾಶಸ್ತ್ಯವನ್ನು ಕಲ್ಪಿಸಿದರು. ಯಾಮುನರ ಕಾಲದಿಂದಲೂ ಬೆಳೆದು ಬಂದಿದ್ದ ಶರಣಾಗತಿ ತತ್ತ್ವದಲ್ಲಿ ಪುರುಷಪ್ರಯತ್ನಕ್ಕಿಂತ ಭಗವಂತನ ಅವ್ಯಾಜವೂ ಅಪಾರವೂ ಆದ ಕರುಣೆಯಲ್ಲಿ ಹೆಚ್ಚು ನಂಬಿಕೆಯುಂಟಾಗುವಂತೆ ಮಾಡಿದರು. ಅಲ್ಲದೆ ಬ್ರಹ್ಮತತ್ತ್ವದಲ್ಲಿ ಲಕ್ಷ್ಮಿಯನ್ನು ಸೇರಿಸದೆ ಅವಳನ್ನು ಜೀವಕೋಟಿಯಲ್ಲಿ ಸೇರಿಸಿ ಭಾಗವತಶೋತ್ತಮಳೆಂದು ಪರಿಗಣಿಸಿದರು. ಈ ತಾತ್ತ್ವಿಕ ಭಿನ್ನತೆಗಳೊಡನೆ ಸಾಮಾಜಿಕ ಆಚಾರ ವ್ಯವಹಾರಗಳಲ್ಲೂ ಭಿನ್ನತೆಯುಂಟಾಯಿತು. ಅದಕ್ಕನುಗುಣವಾಗಿ ಮುಂದೆ ಬಂದವರೆಲ್ಲಾ ದ್ರಾವಿಡ ಗ್ರಂಥಗಳನ್ನೇ ರಚಿಸಿದರು. ಹಿಂದಿನಿಂದ ಪರಂಪರೆಯಾಗಿ ವೇದವನ್ನೂ ಸಂಸ್ಕೃತ ಭಾಷೆಯನ್ನೂ ಹೆಚ್ಚು ಉಪಯೋಗಿಸುತ್ತಿದ್ದ ಭಾಷ್ಯಪಕ್ಷದವರೂ ಪ್ರಬಂಧಪಕ್ಷದವರೂ ಎರಡು ಭಿನ್ನ ಪಂಥಾನುಯಾಯಿಗಳಾದರು. ಸಂಸ್ಕೃತಜ್ಞರು ವಡಗಲೆಯವರೆಂದೂ, ದ್ರಾವಿಡರು ತೆಂಗಲೆಯವರೆಂದೂ ಕರೆಯಲ್ಪಟ್ಟರು. ವೇದಾಂತ ದೇಶಿಕರು ಪರಂಧಾಮವನ್ನೈದಿದ ಕ್ರಿ. ಶ. ೧೩೬೯ನೆಯ ವರ್ಷದಿಂದ ವರವರಮುನಿಗಳು ಪರಂಧಾಮವನ್ನೈದಿದ ಕ್ರಿ. ಶ. ೧೪೪೩ರ ವೇಳೆಗೆ ಎರಡು ಪಂಥಗಳೂ ಪ್ರತ್ಯೇಕ ಶಾಖೆಗಳಂತೆ ಭಿನ್ನ ಭಿನ್ನವಾದುವು. ಆದರೂ ಪ್ರತಿಭೋಜನ, ಅಂತರ್ವಿವಾಹ, ಗೃಹ ಅಥವಾ ದೇವಾಲಯಗಳಿಗೆ ಸಂಬಂಧಪಟ್ಟ ಸಮಾಜಜೀವನ ಮೊದಲಾದವುಗಳಿಗೆ ಸೇರಿದಂತೆ ಯಾವ ಆತಂಕಗಳೂ ಉಂಟಾಗಲಿಲ್ಲ. ಆಚಾರ್ಯನಿಷ್ಠೆ, ತಾತ್ತ್ವಿಕ ಭಿನ್ನತೆ, ದೇವಾಲಯದ ಅಧಿಕಾರ ಮತ್ತು ಮರ್ಯಾದೆಗಳ ವಿಷಯದಲ್ಲಿ ಮಾತ್ರ ಕಚ್ಚಾಟ ಬೆಳೆಯುತ್ತಲೇ ಬಂದಿತು.

ವಡಗಲೆ ಸಂಪ್ರದಾಯದ ಪರಂಪರೆ:—

ಔತ್ತರೇಯ ಪಂಥದ ಗುರುಪರಂಪರೆಯ ಪ್ರಕಾರ ತಾತಾಚಾರ್ಯವಂಶದ ಮೂಲಪುರುಷರಾದ ಕುರುಕೇಶರು ರಾಮಾನುಜರ ಉತ್ತರಾಧಿಕಾರಿಗಳಾದರು. ಅವರ ಆಚಾರ್ಯತ್ವ ಕಾಲದಲ್ಲಿ ದಕ್ಷಿಣದೇಶದ ಅನೇಕ ದೇವಾಲಯಗಳಲ್ಲಿ ರಾಮಾನುಜರ ವಿಗ್ರಹಗಳು ಪ್ರತಿಷ್ಠಿತವಾದವು. ಕುರುಕೇಶರು "ಆರಾಯಿರಪ್ಪಡಿ" ಎಂಬ ನಮ್ಮಾಳ್ವಾರರ ತಿರುವಾಯ್ಮೊಳಿಯ ವ್ಯಾಖ್ಯಾನವೇ ಅಲ್ಲದೆ ಮಂತ್ರ ಮತ್ತು ರಹಸ್ಯಗಳ ವಿಷಯಕವಾದ ಪ್ರಕರಣ ಗ್ರಂಥಗಳನ್ನು ರಚಿಸಿದ್ದಾರೆ. ಮುಂದೆ ರಚಿತವಾದ ಎಲ್ಲ ಪ್ರಬಂಧಗಳ ವ್ಯಾಖ್ಯಾನಕ್ಕೂ ಇವರ ವ್ಯಾಖ್ಯಾನವೇ ಮಾದರಿಯಾಯಿತು. ಅವರ ಉತ್ತರಾಧಿಕಾರಿಗಳಾದ ವಿಷ್ಣುಚಿತ್ತ ಅಥವಾ ಎಂಗಳಾಳ್ವಾರವರು ಎರಡು ಕೃತಿಗಳನ್ನು ಅನುಗ್ರಹಿಸಿದ್ದಾರೆ. ಮೊದಲನೆಯದಾದ "ಸಾರಾರ್ಥಚತುಷ್ಟಯ"ದಲ್ಲಿ ಅವರು ಮಾನವನ ಸ್ವರೂಪ, ಅವನ ಜೀವನದ ಪುರುಷಾರ್ಥಗಳು, ಅವುಗಳನ್ನು ಸಾಧಿಸುವ ಸಾಧನ, ಸಾಧಿಸುವಲ್ಲಿ ಉಂಟಾಗುವ ಪ್ರತಿಬಂಧಕಗಳು — ಈ ನಾಲ್ಕು ವಿಷಯಗಳನ್ನು ಕುರಿತು ವಿಚಾರಮಾಡಿದ್ದಾರೆ. 'ವಿಷ್ಣುಚಿತ್ತೀಯ' ಎಂಬ ಎರಡನೆಯ ಗ್ರಂಥವು ವಿಷ್ಣುಪುರಾಣದ ವ್ಯಾಖ್ಯಾನ.

ವಿಷ್ಣುಚಿತ್ತರಾದ ಮೇಲೆ ಅವರ ಶಿಷ್ಯರಾದ ವರದಾಚಾರ್ಯ ಅಥವಾ ನಡಾದೂರಮ್ಮಾಳ್ ಅವರು ಆಚಾರ್ಯಪೀಠವನ್ನಲಂಕರಿಸಿದರು. ಕಾಂಚೀಪುರದವರೇ ಆದ ಅವರು ತಮ್ಮ ವಾಸಕ್ಕೂ ತಮ್ಮ ಕಾರ್ಯನಿರ್ವಹಣೆಗೂ ಕಾಂಚೀಪುರವನ್ನೇ ಆರಿಸಿಕೊಂಡುದರಿಂದ ಸುಪ್ರಸಿದ್ಧವಾದ ದೇವರಾಜ ಪೆರುಮಾಳ್ ದೇವಾಲಯವು ವ್ಯಾಸಂಗಕ್ಕೂ ವಾದಕ್ಕೂ ಅನುಕೂಲವಾದ ವೈಷ್ಣವಕೇಂದ್ರವಾಯಿತು. ಉಪನಿಷತ್ಸಾರಭೂತವಾದ "ತತ್ತ್ವಸಾರ" ಎಂಬ ಪದ್ಯಗ್ರಂಥವು ಇವರು ರಚಿಸಿದ ಕೃತಿ. ಇವರ ಶ್ರೀಭಾಷ್ಯ ವಿಷಯಕವಾದ ಉಪನ್ಯಾಸ ಮತ್ತು ವ್ಯಾಖ್ಯಾನಗಳನ್ನು "ಶ್ರುತಪ್ರಕಾಶಿಕಾ" ಎಂಬ ಅಭಿದಾನದಿಂದ ಇವರ ಶಿಷ್ಯರಾದ ಸುದರ್ಶನ ಸೂರಿಗಳು ಸಂಗ್ರಹಿಸಿದ್ದಾರೆ. ಈ ಗ್ರಂಥವಿಲ್ಲದಿದ್ದರೆ ರಾಮಾನುಜರಿಂದ ಮುಂದಕ್ಕೆ ಅವರ (ರಾಮಾನುಜರ) ಶ್ರೀಭಾಷ್ಯದ ವಾಸ್ತವ–ವ್ಯಾಖ್ಯಾನದ ಜಾಡೇ ತಿಳಿಯುತ್ತಿರಲಿಲ್ಲವೆಂದು ಉಭಯಪಕ್ಷದವರೂ ಒಪ್ಪುತ್ತಾರೆ. ಆದುದರಿಂದ ಇದು ರಾಮಾನುಜರ ಶ್ರೀಭಾಷ್ಯಕ್ಕೆ ಮಾತ್ರ ಯೋಗ್ಯತೆಯಲ್ಲಿ ಎರಡನೆಯದೆಂದು ಅಂಗೀಕೃತವಾಗಿದೆ. ಸುದರ್ಶನ ಸೂರಿಗಳು "ಶ್ರುತದೀಪಿಕಾ" ಕೆಲವು ಉಪನಿಷತ್ತುಗಳ ವ್ಯಾಖ್ಯಾನ, ರಾಮಾನುಜರ 'ವೇದಾರ್ಥಸಂಗ್ರಹ' ಮತ್ತು ಭಾಗವತ ಭಾಷ್ಯಗಳು—ಇವುಗಳನ್ನು ರಚಿಸಿದ್ದಾರೆ. ಅವರ ಭಾಗವತವ್ಯಾಖ್ಯಾನಕ್ಕೆ "ಶುಕಪಕ್ಷೀಯ" ಎಂದು ಹೆಸರು.

ವರದಾಚಾರ್ಯರು ಪರಂಧಾಮವನ್ನೈದಿದ ಮೇಲೆ ಆಚಾರ್ಯಪೀಠವು ಕಡಾಂಬಿ ಅಪ್ಪುಳ್ಳಾರ್ ಎಂಬ ಅಪರನಾಮಧೇಯವುಳ್ಳ ಆತ್ರೇಯ ರಾಮಾನುಜರಿಗೆ ಲಭ್ಯವಾಯಿತು. ಇವರು ಸಿದ್ಧಾಂತ ಪ್ರತಿಪಾದನಾರೂಪವಾದ "ನ್ಯಾಯಕಲಶ" ಎಂಬುದರ ಕರ್ತೃ. ಮುಂದೆ ಅವರ ಸೋದರಳಿಯಂದಿರಾದ ವೇದಾಂತದೇಶಿಕ ಅಥವಾ ವೇಂಕಟನಾಥರು ಉತ್ತರಾಧಿಕಾರಿಗಳಾಗಿ ಆಚಾರ್ಯರಾದರು.

ಶ್ರೀವೈಷ್ಣವಪ್ರಪಂಚದಲ್ಲಿ ವೇದಾಂತದೇಶಿಕರ ಹೆಸರು ರಾಮಾನುಜರ ಹೆಸರಿಗೆ ಮಾತ್ರ ಎರಡನೆಯದು. ಸಂಪ್ರದಾಯಾಭಿಪ್ರಾಯದ ಪ್ರಕಾರ ಇವರು ತಿರುಪತಿಯ ಶ್ರೀನಿವಾಸನ ಘಂಟಾಂಶದಿಂದ ಅವತರಿಸಿದವರು. ಸುಮಾರು ಮುಕ್ಕಾಲು ಶತಮಾನಗಳ ಕಾಲ ಇವರು ಶ್ರೀವೈಷ್ಣವಪ್ರಪಂಚವನ್ನು ತಮ್ಮ ಗ್ರಂಥಗಳಿಂದಲೂ ಉಪನ್ಯಾಸಗಳಿಂದಲೂ ಉಪದೇಶಗಳಿಂದಲೂ ಸಂಪದ್ಯುಕ್ತವಾಗಿ ಮಾಡಿದುದಲ್ಲದೆ ಕಾಲಾನುಕಾಲದಲ್ಲಿ ತಾವು ಅವತಾರಪುರುಷರೆನ್ನುವಷ್ಟು ಪ್ರಸಿದ್ಧಿಯನ್ನೂ ಪಡೆದರು. ಇವರು ರಚಿಸಿದ ಗ್ರಂಥಗಳು ೧೨೦ ಕ್ಕೂ ಮೀರಿವೆ. ಸರ್ವತೋಮುಖವಾದ ಪ್ರತಿಭೆ, ಅಭಿಪ್ರಾಯ ಮತ್ತು

(33ನೆ ಪುಟ ನೋಡಿ)

ಹರಿದಾಸವಾಣಿ

# ಶ್ರೀಗೋಪಾಲದಾಸರು

ಕರ್ನಾಟಕಹರಿದಾಸಪರಂಪರೆಯ ದಾಸ ಚತುಷ್ಟಯರಲ್ಲಿ ಮೂರನೆಯವರಾದ ಶ್ರೀ ಗೋಪಾಲದಾಸರು ಮಹಾತ್ಯಾಗಿಗಳು, ಕರುಣಾವತ್ಸಲರು, ಗುರುಭಕ್ತಿತಿಲಕರು ಹಾಗೂ ಅಪರೋಕ್ಷಜ್ಞಾನಿಗಳೆನಿಸಿರುವರು. ಶ್ರೀ ಜಗನ್ನಾಥ ದಾಸರಾಯರಿಂದ ಹರಿಕಥಾಮೃತಸಾರವೆಂಬ ಅನರ್ಘ್ಯಕೃತಿರತ್ನ ರಚನೆಗೆ ಗೋಪಾಲ ದಾಸರ ಅನುಗ್ರಹ – ಆಶೀರ್ವಾದಗಳು ಹಲವು ವಿಧದಲ್ಲಿ ಸಹಾಯ ಮಾಡಿದವು. ಇವರ ಕೃತಿಗಳಲ್ಲಿ ಭಕ್ತಿ ಮನೋಹರವಾದುದರಿಂದಲೇ 'ಭಕ್ತಿಯಲಿ ಭಾಗಣ್ಣ' ಎಂದು ಇವರು ಪ್ರಸಿದ್ಧರಾಗಿದ್ದಾರೆ.

ಉತ್ತರ ಕರ್ನಾಟಕದ ರಾಯಚೂರ್ ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿ ಮೊಸರುಕಲ್ಲು (ದಧಿಪಾಷಾಣ) ಎಂಬ ಗ್ರಾಮವಿದೆ. ಈ ಗ್ರಾಮದಲ್ಲಿ ವಾಸಿಸುತ್ತಿದ್ದ ಮುರಾರಿರಾಯ ಮತ್ತು ವೆಂಕಮ್ಮ ಎಂಬ ಮಾಧ್ವ ದಂಪತಿಗಳ ಜ್ಯೇಷ್ಠ ಪುತ್ರರಾಗಿ ಗೋಪಾಲದಾಸರು ಕ್ರಿ. ಶ. 1721 ರಲ್ಲಿ ಜನಿಸಿದರು. ತಾಯ್ತಂದೆಗಳು ಇವರಿಗೆ ಭಾಗಣ್ಣ ಎಂದು ನಾಮಕರಣ ಮಾಡಿದರು. ಕೇವಲ ಐದು ವರ್ಷಗಳು ಕಳೆಯುವಷ್ಟರಲ್ಲಿ ಭಾಗಣ್ಣನಿಗೆ ಪಿತೃವಿಯೋಗ ಉಂಟಾಗಿ ಮನೆಯಲ್ಲಿ ಕಡು ಬಡತನ ಉಂಟಾಯಿತು. ಆಗ ಮೊಸರುಕಲ್ಲನ್ನು ಬಿಟ್ಟು ತಾಯಿಯಾದ ವೆಂಕಮ್ಮ ತನ್ನ ನಾಲ್ವರು ಪುತ್ರರೊಡನೆ ಸುಂಕಾಪುರಕ್ಕೆ ಬಂದು ನೆಲೆಸಿದಳು. ಅಲ್ಲಿ ದಾನವಾಗಿ ಬಂದ ಹೊಲವನ್ನು ಕೃಷಿ ಮಾಡಿ ತನ್ಮೂಲಕ ಜೀವನವನ್ನು ನಡೆಸುತ್ತಿದ್ದರು. ಆದರೆ ಊರಿನ ಶಾನುಭೋಗ ಕೃಷಿಕಾರ್ಯಕ್ಕೆ ಕೆರೆಯ ನೀರನ್ನು ಕೊಡಲೊಪ್ಪದೆ ತೊಂದರೆಗೆ ಗುರಿಪಡಿಸಿದನು. ಆಗ ವಟು ಭಾಗಣ್ಣ ತನ್ನ ತಾಯಿಗಾದ ದುಃಖ – ಅವಮಾನಗಳನ್ನು ಕಂಡು ತಡೆಯಲಾರದೆ ಗಾಯತ್ರೀಮಂತ್ರ ಪುನಶ್ಚರಣೆಯನ್ನು ನಲವತ್ತೆಂಟು ದಿನಗಳಕಾಲ ಮಾಡಿ ಸಿದ್ಧಿಯನ್ನು ಪಡೆದುಕೊಂಡನು. ಸುಂಕಾಪುರವನ್ನು ತ್ಯಜಿಸಿ ಸಮೀಪದ ಉತ್ತನೂರಿಗೆ ಎಲ್ಲರೂ ಬಂದು ಲಕ್ಷ್ಮೀವೆಂಕಟೇಶನ ಗುಡಿಯಲ್ಲಿ ವಾಸಿಸಲಾರಂಭಿಸಿದರು. ಗಾಯತ್ರೀಮಂತ್ರಪ್ರಭಾವದಿಂದ ಭಾಗಣ್ಣ ಭವಿಷ್ಯದ್ವಾಣಿ ನುಡಿಯುವುದರಲ್ಲಿ ನಿಪುಣನೆನಿಸಿದನು. ಇವನಾಡಿದ ಮಾತುಗಳು ಜನರ ಜೀವನದಲ್ಲಿ ನಿಜವಾಗುವ ಕಾಲ ಬಂದಾಗ ಎಲ್ಲರೂ ಆಶೀರ್ವಾದಕ್ಕಾಗಿ ತಲೆಬಾಗಲಾರಂಭಿಸಿದರು. ವೆಂಕಟೇಶನ ಕೃಪೆಯಿಂದ ಜೀವನದ ಬಡತನ ನೀಗಿತು; ಕವಿತ್ವಶಕ್ತಿಯುಂಟಾಯಿತು. ಅಂದಿನಿಂದ ಕೆಲವು ಕೀರ್ತನೆಗಳನ್ನು ರಚಿಸಲಾರಂಭಿಸಿ 'ವೆಂಕಟಕೃಷ್ಣ' ಎಂಬ ಅಂಕಿತವನ್ನು ಉಪಯೋಗಿಸಲಾರಂಭಿಸಿದರು.

ಉತ್ತನೂರಿನ ದೇವಾಲಯದಲ್ಲಿ ಪರಮಾತ್ಮನನ್ನು ಭಕ್ತಿಯಿಂದ ಭಾಗಣ್ಣನವರು ಭಜಿಸುವಾಗ ವೇಣುಗಾನಪ್ರಿಯನು ಕುಣಿಯುವ ಗೆಜ್ಜೆಗಳ ಶಬ್ದವನ್ನು ಹೊರಗಿದ್ದ ಜನರು ಒಮ್ಮೊಮ್ಮೆ ಕೇಳುತ್ತಿದ್ದರಂತೆ!

> ಲಕ್ಷ್ಮೀರಮಣನೆ ರಕ್ಷಿಸುವನೆಂದೀಕ್ಷಿಸಿ
> ಉತ್ತನೂರಿಗೆ
> ಬಂದು ದೇವರ ಗುಡಿ ಪ್ರವೇಶಿಸಿ ನಿಂದು
> ನಲಿನಲಿದಾಡುತ್ತಾ
> ಮಂದಿಗಳು ನೋಡಲ್ಕೆ ಮೌನದಿ
> ಮಂದಮತಿಯಂತೆ ತೋರುತಾ
> ನಿರುತ ಸೇವೆಯ ಮಾಡೆ ಪುರಜನ
> ಹರಿಯ ಮಂದಿರ ದ್ವಾರವ
> ಭರದಿ ಬಂಧಿಸಿ ತೆರಳಲಾಕ್ಷಣ ಕರವ ಬಾರಿಸಿ
> ತುತಿಸುವ
> ವೇಣುಗಾನಪ್ರಿಯನು ಎದುರಲಿ ಕುಣಿವ
> ನೂಪುರ ಶಬ್ದವು
> ಮನಿಗಳಲ್ಲಿಹ ಮನುಜರಾಲಿಸೆ ಮನಕೆ ಕೇವಲ
> ಮೋದವು ॥

ಎಂಬುದಾಗಿ ತಂದೆ ಗೋಪಾಲವಿಠಲರು ತಿಳಿಸಿದ್ದಾರೆ.

ಭಾಗಣ್ಣನವರ ಮಂತ್ರಶಕ್ತಿ ದಿನಕಳೆದಂತೆ ಪ್ರಸಿದ್ಧವಾಗಿ ಆ ಕಾಲದಲ್ಲಿ ಗದ್ವಾಲ್ ಪ್ರಾಂತ್ಯಕ್ಕೆ ರಾಜನಾಗಿದ್ದ ರಾಜಾರಾಮ ಭೂಪಾಲನು ಭೂಮಿ, ಆನೆ, ಕುದುರೆಗಳನ್ನು ಕಾಣಿಕೆಯಾಗಿ ಕೊಟ್ಟು ಆಶೀರ್ವಾದಗಳನ್ನು ಪಡೆದುಕೊಂಡನು. ಶೈವ ಕವಿಯೊಬ್ಬ ಉತ್ತನೂರಿಗೆ ಬಂದು ಭಾಗಣ್ಣನವರಿಂದ ಜಯಪತ್ರಿಕೆಯನ್ನು ಪಡೆಯಲು ಬಯಸಿದಾಗ ಇವರು ತಮ್ಮೊಡನೆ ಕವಿತೆಯ ರಚನೆಯ ಸ್ಪರ್ಧೆಗೆ ಆಹ್ವಾನಿಸಿದರು. ಆಗ ಆ ಕವಿ ಸೋತು ಭಾಗಣ್ಣನವರ ಪ್ರತಿಭೆಗೆ ಮಣಿದು ಹಿಂದಿರುಗಿದನಂತೆ!

ಭಾಗಣ್ಣನವರು ಉತ್ತನೂರಿನಲ್ಲಿ ಶ್ರೀಮಂತರೆನಿಸಿಕೊಂಡರೂ ಲೋಭಿಯಾಗಿರಲಿಲ್ಲ; ಉದಾರ ಹೃದಯರಾಗಿ ವಿಶೇಷ ದಾನಗಳನ್ನು ಮಾಡಿ ನಾಳಿನ ಚಿಂತೆಯಿಂದ ದೂರರಾಗಿದ್ದರು. ಆದರೆ ಬಹುವರ್ಷಗಳ ಕಾಲ ಬಡತನವನ್ನನುಭವಿಸಿದ್ದ ತಾಯಿ ವೆಂಕಮ್ಮ ಮುಂದಿನ ಜೀವನಕ್ಕಾಗಿ ಹೆದರಿ ಏಳುಗಡಿಗೆಗಳಲ್ಲಿ ಧನಧಾನ್ಯಗಳನ್ನು ತುಂಬಿ ಭಾಗಣ್ಣನವರಿಗೆ ತಿಳಿಯದಂತೆ ಭೂಮಿಯಲ್ಲಿ ಹೂಳಿಟ್ಟರಂತೆ! ಆ ವಿಚಾರ ಭಾಗಣ್ಣನವರಿಗೆ ತಿಳಿಯಿತು. ಮರುದಿನ ಆ ಗಡಿಗೆಗಳನ್ನು ತೆಗೆಸಿದಾಗ ಅದರಲ್ಲಿ ಧನಧಾನ್ಯಗಳಿರುವುದರ ಬದಲಾಗಿ ಕ್ರಿಮಿಗಳು ತುಂಬಿರುವುದನ್ನು ತೋರಿಸಿ, 'ಬಚ್ಚಿಟ್ಟ ದನ ಪರರಿಗೆ' ಎಂಬ ಮಾತಿನ ಯಥಾರ್ಥತೆಯನ್ನು ತಿಳಿಸಿದರಂತೆ!



ಡಾ॥ ಕೆ. ಗೋಕುಲನಾಥ್

ಒಂದು ಸಾಳಿಂಗೆ ಬೇಡವೆನ್ನಲು
ಸುಂದರಾಂಗಿಯು ಲೋಭದಿ
ಗಡಿಗೆ ಏಳನು ತುಂಬಿ ಭೂಮಿಯೊಳಡಗಿ –
ಸೆರಡನೆಯ ದಿನದಲಿ
ನೋಡಿ ಕ್ರಿಮಿರಾಸಿಯನು ಇವರ
ಬೇಡಿಕೊಂಡಳು ಕರುಣದಿ

ಜ್ಞಾನ ಭಕ್ತಿಯನ್ನು ಪರಮಾತ್ಮನಲ್ಲಿ ಬೆಳೆಸಿಕೊಂಡು ಉದಾರರಾಗಿ ಜೀವನ ನಡೆಸುತ್ತಿದ್ದ ಭಾಗಣ್ಣನವರಿಗೆ ಅಂಕಿತವು ದೊರೆಯುವ ಕಾಲ ಸನ್ನಿಹಿತವಾಯಿತು. ಒಮ್ಮೆ ದಿವಾನ್ ತಿಮ್ಮಣ್ಣನವರು ತೀರ್ಥಯಾತ್ರೆಗೆಂದು ಯಾದಗಿರಿಗೆ (ನರಸಿಂಹಕ್ಷೇತ್ರ) ಹೋಗಿದ್ದರು. ಅದೇ ಸಮಯಕ್ಕೆ ಅಲ್ಲಿಯೇ ಇದ್ದ ಶ್ರೀ ವಿಜಯದಾಸರ ಪ್ರಭಾವಕ್ಕೆ ಒಳಗಾಗಿ ಅವರ ಶಿಷ್ಯರಾದರು.

ಧಾತ್ರಿಯೊಳು ಯಾದವಗಿರಿಯ ಸತ್ಪಾತ್ರ
ತಿಮ್ಮಣ್ಣನೆಂಬನಾ
ತೀರ್ಥಯಾತ್ರೆಯ ನೆವದಿಂದಾ ಕ್ಷೇತ್ರದಲಿ
ವಾಸಮಾಳ್ದನಾ
ದೇಶ ದೇಶದ ಜನರುಗಳು ಬಂದು ವಾಸವಾಗಿ
ಇಪ್ಪರೊ
ಶ್ರೀಶನಾಜ್ಞದಿ ಅವರವರ ಮನೋಭಿಲಾಷೆ
ಪೂರೈಸುತಿಪ್ಪರೊ
ವೆಂಕಟಕೃಷ್ಣೆಂದು ಪದಗಳಿಗಂಕಿತವು
ನೀಡುತಲಿರೆ
ವೆಂಕಟೇಶನ ದಾಸವರ್ಯರು ನೋಂಕಿ
ವಿಜಯದಿಂ ಬರುತಿರೆ
ದಾಸವರ್ಯರು ಕಂಡು ಇವರಿಗುಪದೇಶವನು
ಕೊಡೂ ಕ್ಷಣಾ
ಏಸು ಜನ್ಮದ ಸುಕೃತವೆನುತಲಿ ಲೇಸು
ಲೇಸೆಂದು ಮೆರೆದನಾ ॥

ಎಂದು ತಂದೆ ಗೋಪಾಲ ವಿಠಲರು ಯಾದಗಿರಿಯಲ್ಲಿ ಭಾಗಣ್ಣನವರಿಗೆ ಅಂಕಿತೋಪದೇಶವಾಯಿತೆಂದು ತಿಳಿಸಿರುತ್ತಾರೆ.

ಅಂಕಿತವು ನಾಸಿತ್ತೆ ನಿನ್ನ ಪ್ರೇರಣೆಯಿಂದ
ಕಿಂಕರಗೆ ಲೌಕಿಕದ
ಡೊಂಕ ನಡತೆಯ ಬಿಡಿಸಿ ಜನುಮ
ಜನುಮದಲಿದ್ದ
ಪಂಕನಿಕರವ ತೊಲಗಿಸಿ ಶಂಕೆ ಪುಟ್ಟದಂತೆ
ಕಾವ್ಯಗಳ ಪೇಳಿಪುದು
ಸಂಕಟಗಳಟ್ಟದ್ದಾಗೆ ವೆಂಕಟ ಕೃಷ್ಣನ,
ನೀನೆ ವಿಜಯವಿಠಲ ಇಂದು
ಅಂಕುರವು ಫಲಿಸಿ ಫಲಪ್ರಾಪ್ತಿಯಾಗಲೊ
॥ ೩ ॥

ವಿಜಯದಾಸರಿಂದ ಅಂಕಿತಪ್ರಾಪ್ತಿಯಾದ ಮೇಲೆ ಬಿಂಬ ದರ್ಶನವನ್ನು ಪಡೆದುಕೊಳ್ಳಲು ಭಾಗಣ್ಣನವರಿಗೆ ಸಾಧ್ಯವಾಯಿತು. ಅವರ ಭಕ್ತಿ, ಜ್ಞಾನ, ಕವಿತಾಶಕ್ತಿಗಳು ಅಧಿಕವಾದುವು. ಅಂಕಿತ ದೊರೆತಮೇಲೆ ಇವರು ರಚಿಸಿದ ಕೃತಿಗಳಲ್ಲಿ 'ಗೋಪಾಲವಿಠಲ' ಎಂಬ ಮುದ್ರಿಕೆ ಇದೆ. ಗೋಪಾಲದಾಸರು ತಮ್ಮ ಜೀವನದಲ್ಲಿ ಅನೇಕ ಮಹಿಮಾತಿಶಯಗಳನ್ನು ತೋರಿದರು. ಪರಮಾತ್ಮನು ಒಮ್ಮೆ ಕುದುರೆಯೇರಿ ಮನುಜ ವೇಷಧಾರಿಯಾಗಿ ಇವರ ಬಳಿ ಬಂದು ಪಂಢರಪುರಕ್ಕೆ ಬರಬೇಕೆಂದು ಹೇಳಿದನು; ಕುದುರೆಯ ಮೇಲೆಯೇ ಕುಳಿತು 'ಆಲೇಸಾಹಿ' (ಬರಲೇ ಇಲ್ಲ?) ಎಂದು ಕೇಳಿ ಆ ಸವಾರ ಮಿಂಚಿ ಮಾಯವಾದಾಕ್ಷಣ ದಾಸರಿಗೆ ತಮ್ಮಲ್ಲಿಗೆ ಬಂದ ವ್ಯಕ್ತಿ 'ವಿಠಲ' ನೆಂದು ಹೊಳೆಯಿತು! ಪರಮಾತ್ಮನು ಬಂದು ಎದುರು ನಿಂತಾಗ ಬುದ್ಧಿ

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ತೋಚದೆ ಹೋದುದಕ್ಕಾಗಿ ಮರುಗಿದರು; ಅನಂತರ ತಾವು ಕಂಡ ರೂಪವನ್ನು ಮನಸಾರೆ ಚಿತ್ರಿಸಿಕೊಂಡು ದೀರ್ಘ ಸುಳಾದಿಯೊಂದನ್ನು ರಚಿಸಿ ಅವನ ಲೀಲಾ ವೈ ಚಿತ್ರ್ಯವನ್ನು ಕೊಂಡಾಡಿದರು.

ನೀಲಗುದುರೆಯನೇರಿ ಶಾಲು ಟೊಂಕಕೆ ಸುತ್ತಿ
ಕಾಲು ಕುಪ್ಪುಸ ತೊಟ್ಟು ಮೇಲೆ ಮೋಹನ ಹಾಕಿ
ಕೋಳು ತಾಯಿತ ಶಿರಕೆ ಮೇಲಾದ ವಸ್ತ್ರ ಸುತ್ತಿ
ಫಾಲಕಸ್ತೂರಿ ಇಟ್ಟು ಮೈಗೆ ಗಂಧವ ಪೂಸಿ
ಪಲಾಯನದಿ ಅಶ್ವವೇರಿ ಹಾರಾಡಿಸುತ್ತ
'ಆಲೇಸಾಹಿ' ಎಂದು ಕೇಳಿದನಾರವ್ವ? ॥ ೪ ॥

ಈ ಘಟನೆ ನಡೆದದ್ದು ಕನಸಿನಲ್ಲೂ ಅಲ್ಲ; ಕತ್ತಲಿನಲ್ಲಿಯೂ ಅಲ್ಲ! ಆದರೆ ಪರಮಾತ್ಮ ಅನಂತಾವತಾರಗಳನ್ನು ತಾಳಿದವನು, ದಾಸರ ಎದುರಿಗೆ ಮಾನುಷ ರೂಪಿನಿಂದಲೇ ಬಂದುದರಿಂದ ಮೋಸಹೋದುದಾಗಿ ದಾಸರು ಮರುಗಿದ್ದಾರೆ:

ಕಾಳಗತ್ತಲು ಅಲ್ಲ ಅತ್ತ ನೋಡಲು ಹಗಲು
ಕೇಳು ತಗ್ಗು ಮಿಟ್ಟೆ ಮೇಲೆ ಮಂಜುರವಲ್ಲ
ಹೇಳಲೇನಾನಿಂದು ಸೋಜಿಗವ
.................................
.................................
ಆಲೋಚನೆಗೆ ಎನಗೆ ತೋರುತಲಿದೆ
ಶೀಲಾ ಮೂರುತಿ ಫಂಡರಿರಾಯ ಗೋಪಾಲ-
ಓಲ್ಯಾಡಿ ಕುದುರೆ ಓಡ್ಯಾಡಿಸುತ್ತ ಪೋದನಲ್ಲಿ! ॥ ೫ ॥

ಪರಮಾತ್ಮನು ಮನುಷ್ಯನಾಗಿ ಅವತರಿಸಿ ಹಿಂದೆ ಸುಜನರ ಉದ್ಧಾರ ಮಾಡಿದುದನ್ನು ಜ್ಞಾಪಿಸಿಕೊಂಡು, 'ಮಾನಿಸನ್ನವನುಂಬ ಮನುಜನಾದುದರಿಂದ ಮಾನುಷ್ಯನಂತೆ ನಿನ್ನ ಮನದಿ ನಿಶ್ಚೈಸಿದೆ' ಎಂದು ದಾಸರು ಹೇಳಿ, 'ಮಾನುಷ್ಯ ಮಹಿಮನೆ ಮರೆಮೋಸ ಮಾಡೋದು ಮಾನಿತವೇನಯ್ಯಾ ಮಾನವಂತನೆ' ಎಂದು ಸಲುಗೆಯ ನುಡಿಗಳನ್ನಾಡಿ 'ಮಾನಗುಣಾಂಬುಧಿ ಗೋಪಾಲವಿಠ್ಠಲ ಮನಸಾವಾಚಾಕಾಯಾ ಮೊರೆಹೊಕ್ಕೆ ಮನನೀಡು' ಎಂದು ಪ್ರಾರ್ಥಿಸಿದರು.

ವಿಜಯದಾಸರಿಗೆ ಗೋಪಾಲದಾಸರು ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಆದುದರಿಂದಲೇ ವಿಜಯದಾಸರು ತಾವು ಪೂಜಿಸುತ್ತಿದ್ದ ವಿಜಯವಿಠಲನ ಪ್ರತಿಮೆಯನ್ನು ಗೋಪಾಲದಾಸರಿಗೆ ಕೊಟ್ಟರು. ಗುರುಗಳು ಈ ಅನುಗ್ರಹವನ್ನು ಮಾಡಿದಾಗ ದಾಸರು ಭಕ್ತಿಯಿಂದ ಕೃತಿಯೊಂದನ್ನು ರಚಿಸಿ ಅರ್ಚಿಸಿದರು.

"ಬಂದ್ಯಾ ವಿಠಲ ಇಂದು ಬಡವನಲ್ಲಿ
ವೃಂದಾವನದಲಿ ಗೋವೃಂದಗಳ ಕಾಯ್ದವನೆ
................................
................................
ಮಾಳಿಗಿ ಶ್ರೀನಿವಾಸಾರ್ಯರ ಮನೆಯಿಂದ
ಶೀಲಗುರು ವಿಜಯರಾಯರಿಗೆ ಒಲಿದು
ಮೇಲಾಗಿ ಬಹುಪರಿಯಿಂದ ಪೂಜೆಯ – ಗೊಂಡು
ಕೇಳು ಮನುಜನ ಎನ್ನ ಪಾಲಿಸಲು ಬೇಕೆಂದು"

ಗೋಪಾಲದಾಸರ ವಂಶದವರಾದ ಗದ್ವಾಲ್‌ನಲ್ಲಿ ವೆಂಕೋಬದಾಸರ ಮನೆಯಲ್ಲಿ ಈ ವಿಗ್ರಹವನ್ನು ಕಾಣಬಹುದಾಗಿದೆ.

ಗೋಪಾಲದಾಸರು ತಮ್ಮ ಮೂರು ಜನ ತಮ್ಮಂದಿರಿಗೂ ಕ್ರಮವಾಗಿ ಗುರು ಗೋಪಾಲವಿಠಲ, ವರದ ಗೋಪಾಲವಿಠಲ, ತಂದೆ ಗೋಪಾಲವಿಠಲ ಎಂದು ಅಂಕಿತ ಪ್ರದಾನ ಮಾಡಿದರು. ಇವರೆಲ್ಲರೂ ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧರಾಗಿರುತ್ತಾರೆ. ಒಮ್ಮೆ ಗೋಪಾಲದಾಸರು ತಮ್ಮ ಇಬ್ಬರು ತಮ್ಮಂದಿರೊಡನೆ ಶ್ರೀ ಸತ್ಯಬೋಧತೀರ್ಥರ ಬಳಿ ಹೋದಾಗ ಅವರು ಎಲ್ಲರನ್ನೂ ಬೇರೆ ಬೇರೆ ಕೊಠಡಿಯಲ್ಲಿ ಕೂಡಿ ಪದ್ಯ ರಚಿಸಲು ಹೇಳಿದಾಗ ಮೂರು ಜನರ ನುಡಿಗಳೂ ಕ್ರಮಬದ್ಧವಾಗಿದ್ದುವಂತೆ!

ಜಗನ್ನಾಥದಾಸರಿಗೆ ಬಂದ ಕ್ಷಯರೋಗವನ್ನು ಪರಿಹರಿಸಿ ತಮ್ಮ ಆಯುಸ್ಸಿನ ನಲ್ವತ್ತು ವರ್ಷಗಳನ್ನು ದಾನ ಮಾಡಿ ಹರಿಕಥಾಮೃತಸಾರ ರಚನೆಗೆ ಕಾರಣರಾದವರು-ಗೋಪಾಲದಾಸರು. ವೆಂಕಟರಾಮಾಚಾರ್ಯರಿಗೆ ಅಂಕಿತ ಪ್ರದಾನ ಮಾಡಿದವರು ಗೋಪಾಲದಾಸರೇ. ಆಚಾರ್ಯರು ಅನಂತರ ಸನ್ಯಾಸಾಶ್ರಮ ಸ್ವೀಕರಿಸಿ ಶ್ರೀವ್ಯಾಸತತ್ತ್ವಜ್ಞರೆನಿಸಿದರು. ಇವರು ಅಗ್ನಿ ಅಂಶದವರೆಂದು ಪ್ರಸಿದ್ಧರಾಗಿದ್ದಾರೆ.

ಗೋಪಾಲದಾಸರು ಕೀರ್ತನೆ, ಸುಳಾದಿಗಳನ್ನು ರಚಿಸಿ ಜನರನ್ನುದ್ಧರಿಸಿದ್ದಾರೆ. ಇವರ ಅನೇಕ ಕೃತಿಗಳಲ್ಲಿ ಪವಿತ್ರವೂ ದೈವಪ್ರೇರಿತವೂ ಆದ ಭಕ್ತಕವಿವಾಣಿಯ ಅಮೃತಧಾರೆಯನ್ನು ನೋಡಬಹುದು, ಅವರ ಕೃತಿಗಳಲ್ಲಿ ಆಳವಾದ ಆಲೋಚನೆ, ವಿಷಯಗಳ ಪರಸ್ಪರ ಸಾಮರಸ್ಯ ಸುಮಧುರಸಂಬಂಧ, ಅವುಗಳ ಅಡಕವಾದ ಜೋಡಣೆಯ ಜಾಣ್ಮೆಗಳನ್ನು ಗುರುತಿಸಬಹುದು. ಗೋಪಾಲದಾಸರ ಉಗಾಭೋಗಗಳಂತೂ ಬಹು ಅರ್ಥಗರ್ಭಿತವಾಗಿಯೂ ಸ್ವಾರಸ್ಯವಾಗಿಯೂ ಭಕ್ತಿರಸಯುಕ್ತವಾಗಿಯೂ ಇವೆ. ಹಿರಿಯ ಯೋಗವಿದ್ಯೆ ಮತ್ತು ಆದರ್ಶ ಸಂತರ ಭಗವದ್ಭಕ್ತಿಗಳೆರಡರ ಮಧುರ ಮಿಳನ ಭಾಗಣ್ಣನವರ ವ್ಯಕ್ತಿತ್ವದಲ್ಲಿ ಕಂಡುಬರುತ್ತದೆ.

ಕೊಲ್ಹಾಪುರದ ಲಕ್ಷ್ಮೀದೇವಿಯನ್ನು ಕುರಿತು ದಾಸರು ರಚಿಸಿರುವ ಕೃತಿಯಲ್ಲಿ ವರ್ಣನಾ ಸೊಬಗು ಮನಸ್ಸನ್ನು ಸೆರೆಹಿಡಿದು ಭಕ್ತಿಭಾವ ಪರವಶವನ್ನಾಗಿ ಮಾಡುವಂತಹುದಾಗಿರುವುದಲ್ಲದೆ, ಅದರಲ್ಲಿನ ನಾದ–ಭಾವಗಳು ಎಂತಹವರನ್ನು ತಲೆದೂಗಿಸುವಂತಿದೆ!

ಮೂರು ನುಡಿಗಳ ಈ ಕೃತಿಯ ಓಟ, ಶಬ್ದಸೌಂದರ್ಯ, ವರ್ಣನೆ, ಗುಣಪ್ರತಿಪಾದನೆಗಳು ಅನನ್ಯವಾಗಿದೆ. ಇವರು ರಚಿಸುವ ಕೃತಿಗಳಲ್ಲಿ 'ಶರಣ ಜನರನು ಪೊರೆವ ಭಾರತಿ ನಿನ್ನ ಚರಣಕೆ ಕೈ ಮುಗಿವೆ' 'ದುರ್ಗೆ ಪಾಲಿಸೆನ್ನ ಮಾತೆ' 'ಒಲಿದೆಯಾತಕಮ್ಮಾ ಲಕುಮಿ', 'ಭ್ರಾಂತಿಬಿಡದೊ ಭಾಗ್ಯಪುರುಷನೆ' 'ಪಾಲಿಸಯ್ಯಾ ಪವನನಯ್ಯಾ' 'ರಥವನೇರಿದ ರಾಘವೇಂದ್ರ' ಮೊದಲಾದ ಕೃತಿಗಳು, ತತ್ತ್ವ, ಭಕ್ತಿ, ಸಾಹಿತ್ಯ ಸೌಂದರ್ಯ, ಶಬ್ದ, ಚಮತ್ಕಾರ— ಈ ಎಲ್ಲ ದೃಷ್ಟಿಗಳಿಂದಲೂ ಉತ್ತಮವಾಗಿರುವಂತಹುದಾಗಿವೆ.

ಗೋಪಾಲದಾಸರ ಸುಳಾದಿಗಳು ಅಧ್ಯಯನ ಮತ್ತು ವ್ಯಾಖ್ಯಾನ ವಿಷಯವಾಗಿವೆ. ಇವರು ರಚಿಸಿರುವ ಸುಮಾರು ಎಪ್ಪತ್ತೈದು ಸುಳಾದಿಗಳು ದೊರೆತು ಪ್ರಕಟವಾಗಿವೆ. ಸಂಖ್ಯೆಯ ದೃಷ್ಟಿಯಿಂದ ಕಡಿಮೆ ಎನಿಸಿದರೂ ಮೌಲ್ಯದ ದೃಷ್ಟಿಯಿಂದ ಅನರ್ಘ್ಯವಾಗಿವೆ. ಇವರ ಕೆಲವು ಸುಳಾದಿಗಳು ವಿದ್ವಾಂಸರಿಗೆ ಒಂದು ಸವಾಲಿನಂತಿವೆ. ಇವರು ಕೆಲವು ಸುಳಾದಿಗರಲ್ಲಿ ತಮ್ಮ ವಿಚಾರವನ್ನು ಧ್ವನ್ಯಾತ್ಮಕವಾಗಿ ಹೇಳಿರುವರು. ಆದರೆ ಅದರ ನಿಜವಾದ ಅರ್ಥ ವಿವರಣೆ ಮಾಡುವುದು ಸುಲಭ ಸಾಧ್ಯವಲ್ಲ.

"ಸನ್ಯಾಸಿ ಎನಿಸಿ ನಾ ನಿನ್ನ ಕಾಣಲೆ ಇಲ್ಲ
ಹನ್ನೆರಡು ನಾಲ್ಕೊರುಷ ನರಕ ಭೋಗಿಸಿಯಿಪ್ಪೆ
ಇನ್ನು ವೈದಿಕನಾಗಿ ಬ್ರಹ್ಮ ಮೋಹವು ತಾಕಿ
ಬನ್ನಬಟ್ಟು ಇಪ್ಪೆ ಇನ್ನು ಕೆಲವು ಹಿಂದೆ
ಹೆಣ್ಣಿಗಾಗಿ ಪೋಗಿ ಮುನ್ನೆ ಪ್ರಾಣವು ಕೊಟ್ಟು
ಇನ್ನು ಅದರ ಶೇಷ ಈಗನುಭವಿಸುವೆ ॥ ೯ ॥

ಇನ್ನು ನಾನಾ ದೋಷ ಘಟಿಸಿ ಇಪ್ಪವು ಬಹಳ
ನಿನ್ನ ಕರುಣದಿಂದ ಕಡೆಹಾಯಿಸೆಂದೆನಿಸಿಪೆ
ಅನಿಮಿತ್ತ ಬಂಧು ಗೋಪಾಲವಿಠಲ
ನಿನ್ನ ಬಿಟ್ಟವನಲ್ಲ ಏನು ಬಂದರನ್ನ ॥ ೧೦ ॥

# ನಿನ್ನ ದರುಶನ ಪಡೆದಂತೆ

ನಿನ್ನ ದರುಶನವ ಪಡೆದು ಬಂದಂತೆ
ತನುಮನಗಳೆಲ್ಲ ನಿರ್ಮಲತೆ ಪಡೆದು ನಡೆದಂತ
ದಿಗ್‌ದಿಗಂತಗಳೆಲ್ಲ ನೇಹದಾಶ್ವಾಸನೆಯನಿತ್ತಂತೆ
ಪ್ರೇಮ ಪೀಯೂಷ ಧಾರೆಧಾರೆಯಾಗಿ ತಾನೇತಾನಾಗಿ ಹರಿವಂತೆ
ಸೂರ್ಯ ಉಷೆಯೊಡನೆ ನರ್ತಿಸುತ ಪೂರ್ವದಲಿ ಬಂದು ನಕ್ಕಂತೆ
ಚಂದ್ರನ ಕಿರಣ ತಾಗಿತಾಗಿ ಕುಮುದೆ ಅರಳಿ ನಕ್ಕಂತೆ
ಪವಿತ್ರತೆಯ ಸಂಕಲೆಯು ಮೇಲೆ ನೇಹಪ್ರೇಮಗಳ ಮುದ್ರೆ ಬಿದ್ದಂತೆ
ಪದ್ಮಾವತಿಯ ದರುಶನದ ಹರುಷದಲಿ ಹೃದಯ ಹಾಡಿ ನಲಿದಂತೆ
ದೇವಾದಿದೇವ ಹೇ ಶ್ರೀನಿವಾಸನೆ ನಿನ್ನನೋಡಿ ಆನಂದಾಶ್ರು ಹರಿದಂತೆ
ಗೋದೆ ತಾನೆಣಿಸಿದಂತೆ ದಿವರಾತ್ರಿ ತಪಿಸಿ ಕೊನೆಗೆ ನಿನ್ನ ಪಡೆದಂತೆ
ಚೈತ್ರದಲಿ ಗುಲಾಬಿ ತಾ ನಸುನಕ್ಕು ಅರಳಿ ಕಂಪ ಸೂಸಿದಂತೆ
ಮಗು ತನ್ನ ತಾಯ ಎದೆಗೆರಗಿ ಶಾಂತಿಯಿಂ ಪವಡಿಸಿ ನಲಿದಂತೆ
ಭವಕಷ್ಟದೂಸರಿತ ಜನ ನಿನ್ನ ಕಾಣುವ ತವಕ ಹೊಂದಿ ಬಂದು
ಕುಳಿತಂತೆ
ಶಿವರಾತ್ರಿಯೊಳು ಶಿವದೇವನನು ಕಂಡ ಪಾರ್ವತಿ ದಿವ್ಯಸೌಂದರ್ಯ
ಪಡೆದಂತೆ
ನಿನ್ನ ಆಲೋಕನದಿಂದೆಲ್ಲ ಲೋಕ ಬೆಳಗಿದೆ ಹೇ ದೇವ ವೆಂಕಟೇಶ!

— ಕುಮುದಪ್ರಿಯ.



ಗೋಪಾಲದಾಸರ ಸುಳಾದಿಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ, ಜಗನ್ನಾಥ ದಾಸರ ಹರಿಕಥಾಮೃತಸಾರದೊಡನೆ ಹೋಲಿಸಿದರೆ ಗುರುಗಳ ಪ್ರಭಾವವನ್ನು ಗುರುತಿಸಬಹುದೆನಿಸುತ್ತದೆ. ಅಂತೆಯೇ ವಿಜಯದಾಸರ ಸುಳಾದಿಗಳ ಪ್ರಭಾವವನ್ನು ಗೋಪಾಲದಾಸರ ಸುಳಾದಿಗಳಲ್ಲಿಯೂ ಅಧ್ಯಯನ ಮಾಡಿ ಗುರುತಿಸಬಹುದು. ಇಂತಹ ಅಧ್ಯಯನದಿಂದ ಹರಿದಾಸರ ಪ್ರತಿಭೆ, ತತ್ತ್ವ ಪ್ರತಿಪಾದನಾ ರೀತಿಯಲ್ಲಿ ಒಬ್ಬೊಬ್ಬ ಭಕ್ತರ ವೈಶಿಷ್ಟ್ಯವೂ ಅರಿವಾಗಬಹುದು. ಈ ವಿಚಾರ ಸಂಶೋಧನೆಗೆ ಯೋಗ್ಯವಾದುದು.

ಗೋಪಾಲದಾಸರು ಹದಿನೆಂಟನೆಯ ಶತಕದ ಗಣೇಶಾಂಶ ಸಂಭೂತರೆಂದು ಪ್ರಸಿದ್ಧರಾಗಿದ್ದಾರೆ.

'ಏಕದಂತನ ಅಂಶದಲಿ ಭೂ ಲೋಕದಲಿ
ಅವತರಿಸಿದಾ
ತಾ ಕಳೇವರವ ಧರಿಸಿ ಶ್ರೀಕಳತ್ರನ
ತುತಿಸಿದಾ" ॥ ೧೧ ॥

ಎಂದು ಗೋಪಾಲದಾಸರ ತಮ್ಮಂದಿರಾದ 'ತಂದೆ ಗೋಪಾಲವಿಠಲರು' ತಿಳಿಸಿರುವರು. ಇಂತಹ ದೇವತೆಗಳ ಶಿಷ್ಯ ಪರಂಪರೆ ಹಿರಿದಾಗಿದೆ. ಇವರ ಶಿಷ್ಯರತ್ನವೆಂದರೆ ಜಗನ್ನಾಥದಾಸರು. ಅವರಿಂದ ಸಜ್ಜನರಿಗಾಗಿರುವ ಉಪಕಾರವನ್ನು ಯಾರೂ ತೀರಿಸಲಾರರು. ಈ ಗುರು ಶಿಷ್ಯರ ಸ್ಮರಣೆಗಿಂತ ಅಧಿಕವಾಗಿ ನಾವು ಏನುತಾನೆ ಮಾಡಲು ಸಾಧ್ಯ?

ಆಗತಾದಿತ್ರಿಕಾಲಜ್ಞಂ
ಆಗಮಾರ್ಥವಿಶಾರದಮ್
ತ್ಯಾಗಭೋಗಸಮಾಯುಕ್ತಂ
ಭಾಗಣ್ಣಾರ್ಯಗುರುಂಭಜೇ ॥



# ಯಮುನಾ ವಿಹಾರಿ ಕೃಷ್ಣ

ಶ್ರೀ ಆದ್ಯ ರಾಮಾಚಾರ್ಯ

ಸಾವಿರಾರು ವರ್ಷಗಳಿಂದ ಮಹಾಮಹಿಮನಾದ ಶ್ರೀಕೃಷ್ಣನ ವ್ಯಕ್ತಿಚಿತ್ರವು ಭಾರತೀಯರೆಲ್ಲರ ಮನೋಮಂಡಲದಲ್ಲಿ ಅಚ್ಚಳಿಯದೇ ಉಳಿದುಕೊಂಡು ಬಂದಿದೆ. ಈ ಮಹಾನುಭಾವನು ಜನ್ಮತಾಳಿದುದು ಉತ್ತರಭಾರತದ ಮಥುರಾಮಂಡಲದಲ್ಲಿ. ಹೀಗಿದ್ದರೂ ಸಹ ಈತನು ಕನ್ನಡನಾಡಿಗೆ ಅತ್ಯಂತ ಚಿರಪರಿತನಾದ ಮಹಾದೈವ ಎಂದು ಪೂಜೆಗೊಳ್ಳುತ್ತ ಬಂದಿರುವುದು ವಿಶೇಷದ ಸಂಗತಿ. ಭಾರತದ ದಾರ್ಶನಿಕ ಆಚಾರ್ಯ ಪುರುಷರಲ್ಲಿ ಒಬ್ಬರೆಂದೆನಿಸಿಕೊಂಡ ಶ್ರೀಮನ್‌ಮಧ್ವಾಚಾರ್ಯರಿಗೆ ಶ್ರೀಕೃಷ್ಣನೇ ಪರಮದೈವ ಎಂದೆನಿಸಿಕೊಂಡಿದ್ದಾನೆ. ಅವರ ಭಕ್ತಿಭಾವಕ್ಕೆ ಮಾರುಹೋದ ಈತನು ಓಖಾಮಂಡಲದ ದ್ವಾರಕಾ ಕ್ಷೇತ್ರದಿಂದ ದಕ್ಷಿಣದ ಕಡಲತೀರವೆಂದು ಕರೆಸಿಕೊಳ್ಳುವ ಉಡುಪಿಕ್ಷೇತ್ರಕ್ಕೆ ಧಾವಿಸಿಬಂದಿದ್ದಾನೆ. ಹೀಗಾಗಿ ಈ ಘಟನೆಯು ಉತ್ತರ ದಕ್ಷಿಣಗಳ ಸಮನ್ವಯ ಸ್ವರೂಪವನ್ನೇ ತಾಳುವಂತಾಗಿದೆ. ಭಕ್ತಿಪಂಥದ ಭಾವುಕರು ಇಂದಿಗೂ ಪ್ರತಿದಿನ ರಜತಪೀಠದಲ್ಲಿ ಆ ಮಹಾನುಭಾವನ ದರ್ಶನವನ್ನು ಪಡೆದು ಪುನೀತರಾಗುತ್ತಲಿದ್ದಾರೆ.

ಶ್ರೀಕೃಷ್ಣನು ಜನ್ಮವೆತ್ತಿದ ನೆಲವನ್ನು ಬ್ರಜಭೂಮಿ ಎಂದು ಕರೆಯುವ ಸಂಪ್ರದಾಯವಿದೆ, ಸಂಸ್ಕೃತ ಸಾಹಿತ್ಯದಲ್ಲಿ ಈ ಶಬ್ದದ ವ್ಯುತ್ಪತ್ತಿಯನ್ನು ಕುರಿತು ಹೇಳುವಾಗ 'ವ್ರಜಂತಿ ಯತ್ರ ಗಾವೋ ಯಸ್ಮಿನ್ನಿತಿ ವ್ರಜಃ' ಎಂದು ವರ್ಣಿಸಲಾಗಿದೆ. ಹಾಗೆಂದರೆ "ಯಾವ ನೆಲದಲ್ಲಿ ಗೋವುಗಳು ಸಮೃದ್ಧವಾಗಿ ಬೆಳೆದು ತೃಪ್ತ ಜೀವನದಿಂದ ಸಂಚರಿಸುತ್ತವೆಯೋ ಆ ನೆಲವನ್ನು "ವ್ರಜ" ಎಂಬುದಾಗಿ ಕರೆದಿದ್ದಾರೆ. ಮುಂದೆ ಕಾಲಾಂತರದಲ್ಲಿ ಈ ವ್ರಜ ಶಬ್ದವೇ ಬ್ರಜ ಎಂದಾಗಿ ಪರಿವರ್ತನೆಗೊಂಡು ಬೃಂದಾವನವಾಗಿ ಪ್ರಸಿದ್ಧಿಯನ್ನು ಪಡೆಯಿತು. ಈ ಬ್ರಜಮಂಡಲವನ್ನಾಳುತ್ತಿದ್ದ ಶತ್ರುಘ್ನನ ಮಗ ಶೂರಸೇನ ಮಹಾರಾಜನೆಂದು ಕರೆಸಿಕೊಳ್ಳುತ್ತಿದ್ದ, ಆದುದರಿಂದ ಕೆಲವು ಕಾಲ ಈ ನೆಲವನ್ನು "ಶೂರಸೇನಾ" ಎಂಬ ಹೆಸರಿನಿಂದಲೇ ಕರೆದಿರುವುದು ತಿಳಿದು ಬರುತ್ತದೆ. ಶ್ರೀಮದ್ ಭಾಗವತದ ದಶಮಸ್ಕಂಧದಲ್ಲಿ ವ್ರಜಮಂಡಲದ ಗೋವುಗಳು, ಗೋಪಾಲಕರು, ಗೋಪಿಯರೊಂದಿಗೆ ಶ್ರೀಕೃಷ್ಣನು ನಡೆಸಿದ ರಾಸಕ್ರೀಡೆ ಹಾಗೂ ಬಾಲಲೀಲೆ ಮೊದಲಾದವುಗಳು ಬಹು ಚೆನ್ನಾಗಿ ವರ್ಣಿತವಾಗಿವೆ. ಇದೇ ರೀತಿಯಾಗಿ ಮತ್ಸ್ಯಪುರಾಣದಲ್ಲಿಯೂ ಕೂಡ ಈ ವ್ರಜ



ಮಂಡಲದ ವರ್ಣನೆಯನ್ನು ನೋಡಬಹುದು. ಶ್ರೀಕೃಷ್ಣನ ಅವತಾರ ಕಾರ್ಯದಿಂದಾಗಿ ಈ ಸ್ಥಳಕ್ಕೆ ಬಹುದೊಡ್ಡ ಸ್ಥಾನವು ಲಭಿಸುವಂತಾಯಿತು. ಆತನ ಲೀಲಾವಿಲಾಸದಿಂದಾಗಿ ವ್ರಜ ಮಂಡಲವು ಭಾರತೀಯರ ಮನದಲ್ಲಿ ಚಿರಸ್ಮರಣೀಯವಾಗಿ ಉಳಿದುಬರುವಂತಾಯಿತು.

ಮಥುರಾನಗರವನ್ನು ಮೊದಲು ಮಧುರಾ ಎಂದು, ಮಧುಪುರ ಎಂದೂ, ಮದೂಕ್ಷೆರ ಎಂದೂ ಮಧುಪಘ್ನ ಎಂದೂ ಕರೆದಿರುವುದಾಗಿ ತಿಳಿದು ಬರುತ್ತದೆ. ಈ ನಗರವು ಹಿಂದಿನಕಾಲದಲ್ಲಿ ಪಾಟಲೀಪುತ್ರ, ಇಂದ್ರ ಪ್ರಸ್ಥ, ಶ್ರಾವಸ್ತಿ, ಕೌಶಾಂಬಿ, ವೈಶಾಲಿ ಮೊದಲಾದ ಮಹಾನಗರಗಳೊಂದಿಗೆ ತನ್ನ ವ್ಯಾವಹಾರಿಕ ಸಂಬಂಧವನ್ನು ಇಟ್ಟು ಕೊಂಡಿತ್ತೆಂದು ತಿಳಿದುಬರುವುದು. ಪ್ರಾಚೀನ ಭಾರತೀಯ ಗ್ರಂಥಗಳಲ್ಲಿ ಈ ಮಹಾನಗರವನ್ನು ಕುರಿತು ಈ ರೀತಿಯಾಗಿ ವರ್ಣಿಸಲಾಗಿದೆ.

ಮಥ್ಯತೇತು ಜಗತ್ಸರ್ವಂ
ಬ್ರಹ್ಮಜ್ಞಾನೇನ ಏನವಾ।
ತತ್ಸಾರಭೂತಂ ಯದ್ಯಸ್ಯಾಂ
ಮಥುರಾ ಸಾ ನಿಗದ್ಯತೇ ॥

ಜ್ಞಾನ, ಭಕ್ತಿ, ವೈರಾಗ್ಯಗಳ ಮಂಥನದಿಂದ ಬ್ರಹ್ಮಜ್ಞಾನವು ಪ್ರಾಪ್ತವಾಗುತ್ತದೆ. ಇಂಥ ದಿವ್ಯವಾದ ಜ್ಞಾನವನ್ನೀಯುವ ಪುಣ್ಯತಮವಾದ ನೆಲವನ್ನು "ಮಥುರಾ" ಎಂಬ ಹೆಸರಿನಿಂದ ಕರೆಯಲಾಗಿದೆ.

ಶ್ರೀಕೃಷ್ಣನ ವ್ಯಕ್ತಿಚಿತ್ರವು ಭಾರತೀಯ ಪುರಾಣಗಳಲ್ಲಿ, ಕಾವ್ಯಗಳಲ್ಲಿ, ನಾಟಕಗಳಲ್ಲಿ, ಜಾನಪದ ಸಾಹಿತ್ಯದಲ್ಲಿ ಸಾಕಷ್ಟು ಪ್ರಮಾಣದಲ್ಲಿ ವರ್ಣಿತವಾಗಿದೆ. ಕೃಷ್ಣ ಎಂದರೆ ಸೆಳೆಯುವವನು, ಉಳುವವನು, ತೊಳೆಯುವವನು, ನಿದ್ರೆಯಿಂದ ಎಬ್ಬಿಸುವವನು ಎಂದರ್ಥ. ಇದು ಪರಮಾತ್ಮನ ಅಂತರ್ಯಾಮಿ ಭಾವವನ್ನು ಜ್ಞಾಪಕಕ್ಕೆ ತರುತ್ತದೆ. ಹೀಗೆ ಮನನಯೋಗ್ಯವಾದದ್ದು ಶ್ರೀಕೃಷ್ಣಮೂರ್ತಿ ಎಂದು ಹೇಳಬಹುದಾಗಿದೆ. ನಮ್ಮ ರಾಷ್ಟ್ರದ ಕವಿಗಳು, ಕಲಾಕೋವಿದರು, ತಮ್ಮ ಭಾವಕ್ಕೆ ಒಗ್ಗಿದಂತಹ ರೀತಿಯಲ್ಲಿ ಶ್ರೀಕೃಷ್ಣನ ಚಿತ್ರವನ್ನು ಚಿತ್ರಿಸುತ್ತ ಬಂದಿದ್ದಾರೆ. ಇವರೆಲ್ಲರಿಗೆ ಸ್ಫೂರ್ತಿಯನ್ನೀಯುವಂತಹ ಕೃತಿ ರಚನೆ ಮಾಡಿದವರು ಮಹರ್ಷಿಗಳಾದ ವೇದವ್ಯಾಸ ಮುನಿಗಳೆಂದು ನಿರ್ವಿವಾದವಾಗಿ ಹೇಳಬಹುದು.

ಶ್ರೀ ಕೃಷ್ಣನು ಈಶ್ವರನ ಅವತಾರವೇ? ಅಥವಾ ಆವನೊಬ್ಬ ಪುರಾಣಪುರುಷನೇ? ಇಲ್ಲವೇ ಎಲ್ಲರಂತೆ ಆತನೂ ಒಬ್ಬ ಸಾಮಾನ್ಯ ಜೀವಿಯೇ? ಎಂಬ ವಿಚಾರಗಳನ್ನು ಕುರಿತು ಅಂದಿನಿಂದ ಇಂದಿನವರೆಗೆ ಅನೇಕರು ಚರ್ಚೆ ಮಾಡುತ್ತಲೇ ಬಂದಿದ್ದಾರೆ. ಆದರೂ ಸಹ ಕೃಷ್ಣ–ನಾರಾಯಣ–ವಾಸುದೇವ – ಈ ಸಂಬಂಧದ ಮೂಲವನ್ನು ಕುರಿತು ಎಷ್ಟು ಚರ್ಚಿಸಿದರೂ ಕಡಿಮೆಯೆಂದನಿಸುತ್ತದೆ. ಕ್ರಿ. ಪೂ. ಆರನೆಯ ಶತಮಾನದ ಸುಮಾರಿನಲ್ಲಿಯೇ ಗರುಡಧ್ವಜಯುಕ್ತನಾದ ಶ್ರೀಕೃಷ್ಣನ ವಿಚಾರವಾಗಿ ಸಾಕಷ್ಟು ಪ್ರಮಾಣದಲ್ಲಿ ನಂಬಿಕೆಯುಂಟಾಗುವಂತಹ ಸಾಕ್ಷಿ ಆಧಾರಗಳು ದೊರೆಯುತ್ತವೆ. ಈತನು ವೃಷ್ಣಿ ಕುಲದ ವಾಸುದೇವನ ಮಗನೆಂದು ತಾನೇ ಹೇಳಿ ಕೊಂಡಿದ್ದಾನೆ, ಪಾಣಿನಿ ಹಾಗೂ ಪತಂಜಲಿಯರ ಗ್ರಂಥಾವಲೋಕದಿಂದಲೂ ಸಹ 'ವೃಷ್ಣೀನಾಂ ವಾಸುದೇವೋಸ್ಮಿ' ಎಂದು ಹೇಳಿಕೊಂಡ ಮಾತಿನ ಬಗ್ಗೆ ಸಾಕಷ್ಟು ಪ್ರಮಾಣಗಳು ಸಿಗುತ್ತವೆ.

ಶ್ರೀಕೃಷ್ಣನ ಜೀವನವನ್ನು ಕುರಿತು ಚಿತ್ರಿಸಿದವರೆಲ್ಲರೂ ಆತನೊಬ್ಬ ಮಹಾ ರಾಜಕಾರಣಿಯೆಂದೂ ಧರ್ಮರಕ್ಷಕನೆಂದೂ, ವಿಶ್ವ ಕುಟುಂಬಿಯೆಂದೂ, ಮಹಾಚಾಣಾಕ್ಷನೆಂದೂ, ಧೈರ್ಯಶಾಲಿಯೆಂದೂ, ಶಸ್ತ್ರವಿದ್ಯಾಪಾರಂಗತನೆಂದೂ, ಸಾಮಗಾನ ವಿದ್ಯಾ ಪಾರಂಗತನೆಂದೂ, ಒಳ್ಳೆಯ ಸಖನೆಂದೂ ಹೀಗೆ ನಾನಾರೀತಿಯಾಗಿ, ನಾನಾ ವಿಧದಲ್ಲಿ, ನವರಸಗಳಿಂದ ಆತನ ರೂಪವು ನಮ್ಮ ಕಣ್ಮನಗಳನ್ನು ತುಂಬುವಂತೆ ಚಿತ್ರವನ್ನು ಬಿಡಿಸುತ್ತ ಬಂದಿದ್ದಾರೆ. ಒಬ್ಬ ವ್ಯಕ್ತಿಯನ್ನು ಕುರಿತು ಇಷ್ಟೊಂದು ವ್ಯಾಪಕವಾದ ರೀತಿಯಲ್ಲಿ ಸಾಹಿತ್ಯ ರಚನೆಯಾದುದು ವಿಶ್ವದ ಬೇರಾವ ಸಾಹಿತ್ಯದಲ್ಲಿಯೂ ನಮಗೆ ಕಾಣಸಿಗಲಾರದು. ಈ ಮಹಾನುಭಾವನು ಒಂದು ಸಂದರ್ಭದಲ್ಲಿ ಹೀಗೆ ಹೇಳಿದ್ದಾನೆ.

ಯೇ ಯಥಾ ಮಾಂ ಪ್ರಪದ್ಯಂತೇ
ತ್ವಾಂ ತಥೈವ ಭಜಾಮ್ಯಹಂ

—ಯಾರು ಎಂಥ ಮನೋಭಾವನೆಯಿಂದ ನನ್ನನ್ನು ಆರಾಧಿಸುತ್ತಾರೆಯೋ, ಪೂಜಿಸುತ್ತಾರೆಯೋ ಅಂಥವರ ಮನೋಭಾವನೆಗಳಿಗೆ ತಕ್ಕಂತೆ ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಫಲವನ್ನೀಯುವೆ.

ಶ್ರೀಕೃಷ್ಣನ ಜನ್ಮಸ್ಥಾನವೆನಿಸಿದ ಮಥುರಾ, ವೃಂದಾವನ, ನಂದಗೋಕುಲ ಮೊದಲಾದ ಸ್ಥಳಗಳನ್ನು ನೋಡಿ ಪುನೀತರಾಗಲು ಭಾವಿಕರಾದ ಭಾರತೀಯರು ಲಕ್ಷಾಂತರ ಸಂಖ್ಯೆಯಲ್ಲಿ ಆ ಸ್ಥಳಗಳನ್ನು ಹುಡುಕಿಕೊಂಡು ಭಕ್ತಿಯಿಂದ ಯಾತ್ರೆ ಹೋಗಿ ಬರುತ್ತಾರೆ

ವಿರಾಟ್‌ಪುರುಷನ ಲೀಲೆಯೊಂದಿಗೆ ಒಂದು ಮಹಾಯುಗವು ಪರಿವರ್ತನೆ ಗೊಂಡಾಗ ಆದು

ತನ್ನ ಪರಿವರ್ತನೆಯೊಂದಿಗೆ ಅನೇಕ ಮಾರ್ಪಾಟುಗಳನ್ನು ಮಾಡಿ ಹೋಗುವುದು ಪ್ರಕೃತಿ ನಿಯಮವೆಂದು ಕರೆಸಿಕೊಳ್ಳುತ್ತದೆ. ಇಂದು ಮಥುರಾ ಮಂಡಲದಲ್ಲಿ ಶ್ರೀಕೃಷ್ಣನ ಜೀವಿತಕಾಲದಲ್ಲಿ ನಡೆದ ಅನೇಕ ಘಟನೆಗಳಿಗೆ ಒಂದಿಲ್ಲೊಂದು ಸ್ಥಳವನ್ನು ತೋರಿಸುವುದು ಸಂಪ್ರದಾಯವಾಗಿ ಬಂದಿದೆ. ಆದರೆ ಶ್ರೀಕೃಷ್ಣನ ಕಾಲದಿಂದಲೂ ಉಳಿದುಕೊಂಡು ಬಂದಿರುವುದೆಂದರೆ ಮಥುರಾ, ವೃಂದಾವನಗಳ ಮಧ್ಯಭಾಗದಲ್ಲಿ ಇಂದಿಗೂ ಹರಿಯುತ್ತಿರುವ ಯಮುನಾನದಿಯನ್ನು ನಾವು ಕಾಣಬಹುದು. ಹಾಗೆಯೇ ಆ ಮಂಜುಳ ಪ್ರವಾಹದ ದಂಡೆಗುಂಟ ಮೈಚಾಚಿನಿಂತಿರುವ ಹಸಿರು ಭೂಮಿ ಹಾಗೂ ಅದಕ್ಕಂಟಿಕೊಂಡು ಬೆಳೆದು ನಿಂತ ಪರ್ವತಗಳ ಸಾಲುಗಳು – ಇವುಗಳನ್ನು ನೋಡುತ್ತಿದ್ದಂತೆಯೇ ಆ ನಿಸರ್ಗದ ಸಹಾಯದೊಂದಿಗೆ ಭಾವಿಕರಾದವರು ಆ ದಿವ್ಯ ಪುರುಷನ ಸಾನ್ನಿಧ್ಯವನ್ನು ಕಲ್ಪನೆ ಮಾಡಿಕೊಳ್ಳಬಹುದು.

ಇಂದು ನಾವು ಕಾಣುವ ಮಥುರಾನಗರವು ಶ್ರೀಕೃಷ್ಣನ ಕಾಲದ ಮಥುರಾ ನಗರವಲ್ಲ, ಯಾಕೆಂದರೆ ಮಹಾಪವಿತ್ರವೆಂದೆನಿಸಿದ ಈ ನೆಲವನ್ನು ಸ್ವಾಧೀನಪಡಿಸಿಕೊಳ್ಳಲು ಅನೇಕ ವಿದ್ರೋಹಿಗಳು, ವಿದೇಶಿಯರು ಸಾಕಷ್ಟು ಪ್ರಮಾಣದಲ್ಲಿ ಧಾಳಿಮಾಡಿದ್ದಾರೆ. ಅಷ್ಟೇಕೆ ಕಂಸನ ಮಾವನೆಂದು ಕರೆಸಿಕೊಳ್ಳುತ್ತಿದ್ದ ಜರಾಸಂಧನೇ ಹದಿನೇಳುಸಲ ಈ ಮಂಡಲದ ಮೇಲೆ ದಾಳಿಯನ್ನು ಮಾಡಿದನೆಂದು ಪುರಾಣಗಳಿಂದ ತಿಳಿದುಬರುತ್ತದೆ. ವೃಷ್ಣಿಕುಲದ ಮೇಲೆ ಜರಾಸಂಧನಿಂದಾಗುತ್ತಿದ್ದ ಧಾಳಿಗಳಿಂದ ಪಾರಾಗಲು, ತನ್ನ ಜನರನ್ನು ರಕ್ಷಿಸುವುದಕ್ಕಾಗಿ ಆತನು ತನ್ನೆಲ್ಲ ಬಂಧುಬಾಂಧವರೊಂದಿಗೆ ಗೋಸಮೂಹವನ್ನು ಕಟ್ಟಿಕೊಂಡು, ತಾನು ಹುಟ್ಟಿ ಬೆಳೆದ ಕ್ರೀಡಾಕ್ಷೇತ್ರವನ್ನು ತೊರೆದು ದೂರದ ಸಮುದ್ರದಂಡೆಯಲ್ಲಿರುವ ಓಖಾ ಮಂಡಲಕ್ಕೆ ಅವರೆಲ್ಲರನ್ನೂ ಕರೆದುಕೊಂಡು ಹೋಗಿ ಸ್ವಪ್ರಯತ್ನದಿಂದ ತನ್ನದೇ ಆದ ಸುಭದ್ರವಾದ, ಸುಂದರವಾದ, ಮಹಾನಗರವನ್ನು ನಿರ್ಮಾಣಮಾಡಿಕೊಂಡನೆಂಬ ಕಥೆಯು ಮಹಾಭಾರತದ ಅಭ್ಯಾಸದಿಂದ ತಿಳಿದು ಬರುತ್ತದೆ. ಸಂಪದ್ಭರಿತವಾದ ಕೃಷ್ಣನಿಂದ ನಿರ್ಮಿತವಾದ ಈ ಮಹಾನಗರವನ್ನು "ದ್ವಾರಕಾ'' ಎಂಬ ಹೆಸರಿನಿಂದ ಕರೆಯುವುದು ರೂಢಿಯಲ್ಲಿ ಬಂದಿತು.

ಇಂದು ನಾವು ಕಾಣುತ್ತಿರುವ ಮಥುರಾ ನಗರದಲ್ಲಿ ಚಂದ್ರಗುಪ್ತ ವಿಕ್ರಮಾದಿತ್ಯನ ಕಾಲಾವಧಿಯಲ್ಲಿ ಶ್ರೀಕೃಷ್ಣ ಜನ್ಮಸ್ಥಳದಲ್ಲಿಯೇ ಆತನು ಒಂದು ದೇವಾಲಯವನ್ನು ಕಟ್ಟಿಸಿದನೆಂದು ತಿಳಿದು ಬರುವುದು. ಆದರೆ ಮುಂದೆ ಆ ದೇವಾಲಯವೂ ಸಹ ಆಕ್ರಮಣಕಾರರ ದವಡೆಗೆ ಸಿಕ್ಕುವಂತಾದುದು ವಿಷಾದನೀಯವಿಚಾರ, ಈ ಮಹಾನಗರದ ಮೇಲೆ ಹೂಣರು, ಶಕರು, ಬೌದ್ಧರು ಜೈನರು ಹಾಗೂ ಮಹಮ್ಮದೀಯರು ಅನೇಕ ಸಲ ಪ್ರಭುತ್ವ ನಡೆಸಿದ್ದಾರೆ. ಅವರ ಅಧಿಕಾರಾವಧಿಯಲ್ಲಿ ಸಾಕಷ್ಟು ಮಾರ್ಪಾಟುಗಳಾಗಿವೆ. ಕ್ರಿ. ಶ ಸಾವಿರದ ಹದಿನೇಳರಲ್ಲಿ (1017) ರಲ್ಲಿ ಮಹಮ್ಮದ್‌ಘಜನಿ ಎಂಬಾತನು ಅವ್ಯಾಹತವಾಗಿ ಇಪ್ಪತ್ತುದಿನಗಳ ಕಾಲ ಈ ಮಹಾನಗರವನ್ನು ಕೊಳ್ಳೆಹೊಡೆದಿದ್ದಾನೆ, ಈ ಹೋರಾಟ ಕಾಲದಲ್ಲಿ ಆತನು ಇಲ್ಲಿರುವ ಎಲ್ಲ ದೇವಮಂದಿರವನ್ನು ಹಾಳುಮಾಡಿದಾಗ ಹದಿನಾಲ್ಕು ಮಣ ತೂಕದ ಚಿನ್ನದ ವಿಗ್ರಹಗಳು ಆತನಿಗೆ ದೊರೆತವೆಂದೂ, ನೂರು ಒಂಟೆಗಳ ಮೇಲೆ ಆತನು ಲೂಟಿಯ ಸಾಮಾನುಗಳನ್ನು ಸಾಗಿಸಿಕೊಂಡು ಹೋದನೆಂದು ಇತಿಹಾಸದಿಂದ ತಿಳಿದುಬರುತ್ತದೆ. ಕ್ರಿ.ಶ. ಸಾವಿರದ ಒಂದುನೂರ ತೊಂಬತ್ತಮೂರರಲ್ಲಿ (1193) ಅಹ್ಮದ್‌ಘೋರಿ ಎಂಬಾತನು ಮಥುರಾನಗರವನ್ನು ಲೂಟಿಮಾಡಿದ, ಆತನೊಂದಿಗೆ ಹೋರಾಡುವಾಗ ಕನೋಜದ ರಾಜಾ ಜಯಚಂದ್ರನು ಅಸುನೀಗಿದ. ಅನಂತರ ಕ್ರಿ. ಶ. ಸಾವಿರದ ಐದುನೂರರಲ್ಲಿ (1500) ಸಿಕಂದರ್ ಲೋದಿ ಎಂಬಾತನು ಈ ಮಹಾನಗರದ ಮೇಲೆ ದಾಳಿಯನ್ನು ಮಾಡಿದ. ಇದಾದನಂತರ ಹಿಂದೂ ಧರ್ಮದ ಪರಮದ್ವೇಷಿ ಎಂದೆನಿಸಿಕೊಂಡಿದ್ದ ಔರಂಗಜೇಬನ ಕಾಲಾವಧಿಯಲ್ಲಿ ಸಾವಿರದ ಆರುನೂರ ಅರವತ್ತೆಂಟರಲ್ಲಿ (1668) ಈ ಮಹಾನಗರವು ಆತನ ದಾಳಿಗೆ ತುತ್ತಾಯಿತು. ಔರಂಗಜೇಬನ ಸೋದರನೆಂದು ಕರೆಸಿಕೊಳ್ಳುತ್ತಿದ್ದ ದಾರಾ ಶುಕೋಹನಿಂದ ಸ್ಥಾಪಿಸಲ್ಪಟ್ಟ ಬಂಗಾರದ ಗರುಡಗಂಬವನ್ನು (ಕೇಶವ್‌ಜೀ ದೇವಮಂದಿರದ ಮುಂಭಾಗದಲ್ಲಿದ್ದ ಗರುಡಗಂಬವನ್ನು) ಕಿತ್ತು ಹಾಕಲು ವ್ಯವಸ್ಥಿತವಾದ ದಾಳಿಯು ನಡೆದು ಹೋಯಿತು. ಅಲ್ಲಿದ್ದ ವಿಗ್ರಹಗಳನ್ನು ನಾಥದ್ವಾರ್‌ಕ್ಕೆ ಕೊಂಡೊಯ್ಯಲಾಯಿತು. (ಇದು ತಿರುಪತಿಯಷ್ಟೇ ಪ್ರಸಿದ್ಧವಾದ ಕ್ಷೇತ್ರವೆನಿಸಿದೆ ) ಆದರೆ ಮೊದಲಿನ ದೇವಾಲಯವು ಮಾತ್ರ ಸಂಪೂರ್ಣ ಹಾಳಾಗಿ ಹೋಯಿತು.

ಔರಂಗಜೇಬನ ಮರಣಾಂತರ ಈ ಕ್ಷೇತ್ರವು ಮಹಾರಾಷ್ಟ್ರದ ಪಂತ ಪ್ರಧಾನರಾಗಿದ್ದ ಪೇಶ್ವಗಳ ಅಧೀನಕ್ಕೊಳಪಟ್ಟು, ಅವರ ಅಂಕಿತ ಸರದಾರರೆನಿಸಿದ ಸಿಂಧ್ಯೆ, ಹೋಳ್ಕರ್ ಮೊದಲಾದವರು ಈ ಸ್ಥಳದ ಮೇಲೆ ತಮ್ಮ ಪ್ರಭುತ್ವವನ್ನು ನಡೆಸಿದರು. ಅದೇ ರೀತಿಯಾಗಿ ಜೈಪುರ್ ಹಾಗೂ ಭರತ್‌ಪುರ್ ರಾಜಮನೆತನದವರೂ ಸಹ ಈ ಕ್ಷೇತ್ರದ ಮೇಲೆ ತಮ್ಮ ಒಡೆತನ ನಡೆಸಿದುದು ಇತಿಹಾಸದಿಂದ ತಿಳಿದುಬರುವುದು.

ಶ್ರೀಕೃಷ್ಣನಿಗೆ ಜನ್ಮಪವಿತ್ರ ಈ ನೆಲವನ್ನು ಭಾರತೀಯರು ತೀರ್ಥರಾಜ ಎಂಬ ಹೆಸರಿನಿಂದ ಕರೆದಿದ್ದಾರೆ. ಮಥುರಾಮಂಡಲದ ವಿಸ್ತಾರ ಹಾಗೂ ಅದರ ವ್ಯಾಪ್ತಿಯನ್ನು ಕುರಿತು ವರಾಹ ಪುರಾಣದಲ್ಲಿ ಈ ಕೆಳಗಿನಂತೆ ಹೇಳಲಾಗಿದೆ.

ವಿಂಶತಿರ್ಯೋಜನಾನಾಂ
ಮಾಥುರಂ ಮಮ ಮಂಡಲಮ್ ।
ಯತ್ರ ಯತ್ರ ನರಃಸ್ನಾತ್ವಾ
ಮುಚ್ಯತೇ ಸರ್ವ ಪಾತಕೈಃ ॥

ಮಥುರಾ ಮಂಡಲದ ವಿಸ್ತಾರವು ಎಂಬತ್ತಾಲ್ಕು ಹರಿದಾರಿಗಳನ್ನು ವ್ಯಾಪಿಸಿದ್ದು ಇದರಲ್ಲಿ ಮಹಾವನ, ಮಧುವನ, ತಾಳವನ, ವೃಂದಾವನ ಕಾಮವನ, ಕುಮುದವನ, ಎಂಬಿತ್ಯಾದಿ ಹನ್ನೆರಡು ವಿಸ್ತಾರವಾದ ವನಗಳಿವೆ. ಅಲ್ಲಿ ನಾನಾತರಹದ ತೀರ್ಥಗಳಿವೆ. ಈ ಪುಣ್ಯ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ಸಕಲ ಪಾಪಗಳೂ ಪರಿಹಾರವಾಗುವುದೆಂಬ ನಂಬಿಕೆ ನಮ್ಮ ಜನತೆಯಲ್ಲಿ ಬೇರೂರಿಕೊಂಡು ಬಂದಿದೆ. ಮಧುವನದಲ್ಲಿಯೇ ಮಹಾಮಹಿಮನಾದ ಧ್ರುವಮಹಾರಾಜನು ತಪವನ್ನಾಚರಿಸಿದನೆಂದು ಹೇಳುತ್ತಾರೆ, ಇಲ್ಲಿಯೇ ಪೂತನಿಯ ಸಂಹಾರವಾಯಿತೆಂದು ತೋರಿಸುತ್ತಾರೆ.

ಬ್ರಜವಾಸಿಗಳು ಸಸ್ಯ ಸಮೃದ್ಧವಾದ ಗೋವರ್ಧನ ಪರ್ವತದ ಆಶ್ರಯದಲ್ಲಿ ಇಂದ್ರನ ಪೂಜೆಯನ್ನು ಮಾಡುತ್ತ ಬಂದಿದ್ದರು. ಶ್ರೀಕೃಷ್ಣನ ಕಾಲಾವಧಿಯಲ್ಲಿ ಆ ಪೂಜೆಯನ್ನು ನಿಲ್ಲಿಸಲಾಯಿತು, ಕುಪಿತನಾದ ಇಂದ್ರದೇವನು ಧಾರಾಕಾರವಾಗಿ ಮಳೆಯನ್ನು ಸುರಿಸಲಾರಂಬಿಸಿದ, ಆಗ ಬ್ರಜವಾಸಿಗಳ ರಕ್ಷಣಾರ್ಥವಾಗಿ ಶ್ರೀಕೃಷ್ಣನು ಆ ಬೆಟ್ಟವನ್ನೇ ಬೆರಳಮೇಲೆತ್ತಿ ಹಿಡಿದು ಅವರೆಲ್ಲರನ್ನು ರಕ್ಷಿಸಿದ. ಆದುದರಿಂದಲೇ ಆ ಮಹಾನುಭಾವನನ್ನು ಶ್ರೀನಾಥ ಎಂಬ ಹೆಸರಿನಿಂದ ಪೂಜಿಸತೊಡಗಿದರು. ಶ್ರೀಕೃಷ್ಣನ ಹಸ್ತಸ್ಪರ್ಶವಾದ ಗೋವರ್ಧನ ಪರ್ವತವು ಎಂದು ಕರಗಿಹೋಗುವುದೋ ಎಂಬ, ಹಾಗೂ ಯಮುನೆಯ ಪ್ರವಾಹವು ಉಕ್ಕೇರಿ ಬಂದು ಜಲಪ್ರಳಯವಾಗುವುದೆಂಬ ನಂಬಿಕೆ ಪರಿಸರದ ಜನರಲ್ಲಿ ಉಳಿದು ಬಂದಿದೆ. ಈ ಗೋವರ್ಧನಪರ್ವತದ ಮೇಲೆ ಶ್ರೀನಾಥಜೀಯ ದೇವ ಮಂದಿರವಿದೆ. ಮೇಲ್ಭಾಗದಲ್ಲಿ ಮಾನಸೀಗಂಗಾ ಎಂಬ ಹೆಸರಿನ ಸರೋವರವಿದೆ. ದೇವಾಲಯದ ಸುತ್ತ ಮುತ್ತ ಪುಟ್ಟ ಗ್ರಾಮವೇ ಉಳಿದುಕೊಂಡು ಬಂದಿದೆ. ಮಹಾನುಭಾವರಾದ ಸಂತಸೂರದಾಸರು ತಮ್ಮ ಜೀವಿತಾವಧಿಯಲ್ಲಿ

ಕುಳಿತು ಹಾಡಿದ ಸ್ಥಳವನ್ನು ಇಲ್ಲಿ ತೋರಿಸುತ್ತಾರೆ. ಕಾರ್ತೀಕಮಾಸದಲ್ಲಿ ಗೋವರ್ಧನ ಪರ್ವತದಲ್ಲಿ ಉತ್ಸವಾದಿಗಳು ನಡೆಯುತ್ತವೆ.

ಕಂಸನಿಂದ ಬಂಧಿಸಲ್ಪಟ್ಟ ತಂದೆ ತಾಯಿಗಳಿಂದ ಶ್ರೀಕೃಷ್ಣನು ಬಂದೀಖಾನೆಯಲ್ಲಿಯೇ ಜನಿಸಿದರೂ ಸಹ, ಆತನು ಯಮುನಾ ನದಿಯ ಇನ್ನೊಂದು ದಡದಲ್ಲಿರುವ ನಂದನ ಮನೆಯಲ್ಲಿ ಬೆಳೆಯ ತೊಡಗಿದ. ಅದನ್ನು ನಂದಗಾಂವ್ ಎಂದು ಕರೆಯುತ್ತಾರೆ. ಅದೇ ರೀತಿಯಾಗಿ ಶ್ರೀ ಕೃಷ್ಣನ ಪ್ರಿಯ ಸಖಿಯಾದ ರಾಧೆಯ ತಂದೆ ವೃಷಭಾನು ಎಂಬಾತನು ವಾಸಿಸುತ್ತಿದ್ದ ಸ್ಥಳವನ್ನು ಬರಸಾನ್ಯಕೆ ಟೀಕಡಿ ಎಂದು ತೋರಿಸುತ್ತಾರೆ. ಈ ಸ್ಥಳದಲ್ಲಿ ಶ್ರೀಕೃಷ್ಣನ ಪಾದಕಮಲಗಳು ಮೂಡಿವೆ ಎಂಬುದಾಗಿ ತೋರಿಸುತ್ತಾ ಆತನು ರಾಧೆಯೊಂದಿಗೆ ರಾಸಕ್ರೀಡೆಯಾಡಿದ ಗುರುತುಗಳಿವು ಎಂದು ಹೇಳುತ್ತಾರೆ.

ಪುರಾಣಗಳಲ್ಲಿ ಮಥುರಾನಗರವನ್ನು ಆದಿ ವರಾಹಕ್ಷೇತ್ರವೆಂದು ವರ್ಣಿಸಲಾಗಿದೆ ಈ ನಗರದ ನಾಲ್ಕೂ ದಿಕ್ಕಿನಲ್ಲಿ ಭೂತೇಶ್ವರ, ತಿಪ್ಪಲೇಶ್ವರ, ರಂಗೇಶ್ವರ, ಗೋಕರ್ಣೇಶ್ವರ ಎಂಬ ಹೆಸರಿನ ಪ್ರಾಚೀನ ಈಶ್ವರ ದೇವಾಲಯಗಳಿವೆ. ಈ ಮಹಾನಗರದಲ್ಲಿರುವ ಶ್ರೀಕೃಷ್ಣದೇವಾಲಯವನ್ನು ಆತನ ಮೊಮ್ಮಗನಾದ ವ್ರಜನಾಥ ಎಂಬುವವನು ಕಟ್ಟಿಸಿದನೆಂದು ಹೇಳುತ್ತಾರೆ. ಮಥುರಾನಗರವನ್ನು ಪ್ರವೇಶ ಮಾಡಲು ಭರತ್ ಪೂರ್ ದರ್ವಾಜಾ, ಡೀಗ್‌ದರ್ವಾಜ, ವೃಂದಾವನ್ ದರ್ವಾಜಾ, ಹೋಲಿ ದರ್ವಾಜಾ ಎಂಬ ಹೆಸರಿನ ನಾಲ್ಕು ಮಹದ್ವಾರಗಳಿವೆ, ಇವುಗಳಲ್ಲಿ ಹೋಲಿದರ್ವಾಜಾ ಎಂಬ ಅಗಸೆಯ ಬಾಗಿಲು ತುಂಬಾ ಚೆನ್ನಾಗಿದೆ.

ಶ್ರೀಕೃಷ್ಣ ಭಕ್ತರೂ ಕಾಲಾಂತರದಲ್ಲಿ ಮಥುರಾನಗರದಲ್ಲಿ ತಮಗನುಕೂಲವಾದ ಸ್ಥಳವನ್ನು ಹುಡುಕಿಕೊಂಡು ಅಲ್ಲಲ್ಲಿ ದೇವಮಂದಿರಗಳನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ. ಇವುಗಳಲ್ಲಿ ಗ್ವಾಲಿಯರ್ ಸಂಸ್ಥಾನದ ಖಜಾಂಚಿಗಳಾಗಿದ್ದ ಸೇಠ್ ಗೋಕುಲದಾಸ್ ಎಂಬ ಮಹನೀಯರಿಂದ ಕಟ್ಟಿಸಲ್ಪಟ್ಟ ದ್ವಾರಕಾನಾಥನ ಮಂದಿರವು ಬಹುಜನರನ್ನು ಆಕರ್ಷಿಸುವ ಮಂದಿರವೆಂದೆನಿಸಿಕೊಂಡಿದೆ. ಇಲ್ಲಿ ವಲ್ಲಭಾಚಾರ್ಯರ ಸಂಪ್ರದಾಯಸ್ಥರಾದ ಕಾಂಕ್ರೋಲಿ ಪೀಠದವರ ಅಧಿಕಾರವಿದೆ. ಇಲ್ಲಿರುವ ಕೆಲವು ದೇವಾಲಯಗಳಲ್ಲಿ ನಿಂಬಾರ್ಕಪಂಥೀಯರ ಪೂಜೆಗಳು ನಡೆಯುತ್ತಿದ್ದರೆ ಮತ್ತೆ ಕೆಲವು ದೇವಮಂದಿರಗಳಲ್ಲಿ ರಾಮಾನುಜೀಯ ಪಂಥದವರ ಅರ್ಚನೆಗಳು ನಡೆಯುತ್ತವೆ.

ಮಥುರಾನಗರದಲ್ಲಿರುವ ಯಮುನಾ ನದಿಯ ದಂಡೆಗುಂಟಾ ಅತ್ಯಂತ ಸುಂದರವಾದ ಅನೇಕ ಸ್ನಾನಘಟ್ಟಗಳಿವೆ, ಈ ಎಲ್ಲ ಘಟ್ಟಗಳಲ್ಲಿ "ವಿಶ್ರಾಮ್‌ಘಾಟ್" ಎಂಬುದು ಪರಮ ಪವಿತ್ರವಾದ ಸ್ಥಳವೆಂದು ಗುರುತಿಸಲ್ಪಡುತ್ತದೆ. ಯಾಕೆಂದರೆ ಶ್ರೀ ಕೃಷ್ಣನು ಪ್ರಜಾಪೀಡಕನಾಗಿದ್ದ ತನ್ನ ಸೋದರಮಾವನಾದ ಕಂಸನನ್ನು ಸಂಹಾರಮಾಡಿದ ನಂತರ ಯಮುನಾನದಿಯ ದಂಡೆಯಮೇಲೆ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ಪಡೆದುಕೊಂಡನು. ಆ ಕಾರಣವನ್ನೇ ಮುಂದೆ ಆತನ ಭಕ್ತರು ವಿಶ್ರಾಮ್‌ಘಾಟ್ ಎಂಬ ಹೆಸರಿನಿಂದ ಕರೆಯಲಾರಂಭಿಸಿದರು. ಈ ಸ್ನಾನಘಟ್ಟವು ಬಹು ಚಿತ್ತಾಕರ್ಷಕವಾದ ರೀತಿಯಲ್ಲಿ ಕಟ್ಟಲ್ಪಟ್ಟಿದೆ. ಈ ಸ್ಥಳ ಬಂದುನಿಂತ ಯಾತ್ರಿಕನ ಮನಸ್ಸಿಗೂ ಸಹ ಅಹ್ಲಾದವನ್ನುಂಟುಮಾಡುತ್ತದೆ. ಹಿಂದೆ ಈ ಮಂಟಪದಲ್ಲಿಯೇ ದತಿಯಾ ಮಹಾರಾಜರು ಎಂಬತ್ತೊಂದು ಮಣ ಬಂಗಾರದಿಂದ ತಮ್ಮ ತುಲಾಭಾರವನ್ನು ಮಾಡಿಸಿಕೊಂಡು ಆ ಎಲ್ಲ ಸುವರ್ಣವನ್ನು ಆ ಸ್ಥಳದಲ್ಲಿಯೇ ದಾನ ಮಾಡಿದರೆಂದು ಹೇಳುತ್ತಾರೆ. ಇದೇ ರೀತಿಯಾಗಿ ಕಾಶಿಯ ಮಹಾರಾಜರು, ಜೈಪುರದ ಸಂಸ್ಥಾನಿಕರು ತಮ್ಮ ಸುವರ್ಣ ತುಲಾಭಾರವನ್ನು ಈ ವಿಶ್ರಾಮಘಾಟದಲ್ಲಿಯೇ ಮಾಡಿಸಿಕೊಂಡರೆಂಬ ವಿಷಯವು ಸ್ಥಳದ ಇತಿಹಾಸದಿಂದ ತಿಳಿದುಬರುತ್ತದೆ.

ಪ್ರತಿವರ್ಷ ಚೈತ್ರಶುದ್ಧ ಷಷ್ಠಿಯ ದಿನದಂದು ಇಲ್ಲಿ ಯಮುನಾದೇವಿಯ ಜನ್ಮದಿನೋತ್ಸವವನ್ನು ಬಹು ವೈಭವದಿಂದ ಆಚರಿಸಲಾಗುತ್ತದೆ, ಆ ಹಬ್ಬವನ್ನು ನೋಡುವುದೆಂದರೆ ಯಾತ್ರಿಕರಿಗೆ ತಮ್ಮ ಜೀವನವು ಸಾರ್ಥಕವಾದ ಅನುಭವವಾಗುತ್ತದೆ. ಇಲ್ಲಿಯ ಯಾವ ದೇವಾಲಯಕ್ಕೆ ಕಾಲಿಟ್ಟರೂ ಸಹ ಶ್ರೀಕೃಷ್ಣನ ಮಹಿಮಾಪೂರಿತವಾದ ಗೀತಗೋವಿಂದ ಕಾವ್ಯವನ್ನೋ ಅಥವಾ ಶ್ರೀಮದ್ ಭಾಗವತದ ಶ್ಲೋಕಗಳನ್ನೋ ಪಠಿಸುತ್ತಿರುವುದನ್ನು ನಾವು ಕೇಳಬಹುದು. ಇಲ್ಲಿಯ ನಿವಾಸಿಗಳು ನಂದಲಾಲ್, ಬಾಕೇಬಿಹಾರಿ, ಮುರಲಿ ಮಾಧವ, ಗಿರಿಧರಗೋಪಾಲ್, ರಾಧೇಶ್ಯಾಂ, ಕೃಷ್ಣಕನ್ನಯ್ಯ ಎಂಬೆಲ್ಲ ಹೆಸರಿಟ್ಟು, ಆ ಹೆಸರುಗಳಿಂದ ತಮ್ಮ ಮಕ್ಕಳನ್ನು ಕೂಗುತ್ತಿರುವಾಗ ಆ ಧ್ವನಿಯೊಂದಿಗೆ ಯಾತ್ರಿಕನ ಮನಸ್ಸು ಭಕ್ತಿಭಾವದಿಂದ ಶ್ರೀ ಕೃಷ್ಣನ ಲೀಲಾ ವಿನೋದಗಳನ್ನು ಕುರಿತು ಚಿಂತಿಸುತ್ತದೆ.

ಶ್ರೀಕೃಷ್ಣನು ಗೋಪಿಕಾ ಸ್ತ್ರೀಯರೊಂದಿಗೆ ರಾಸಕ್ರೀಡೆಯಾಡಿದುದನ್ನು ಕುರಿತು ಚಿಂತಿಸುವಾಗ ಅದನ್ನು ಪ್ರಕೃತಿ – ಪುರುಷ, ಸಮಾಗಮವೆಂದೂ ಜೀವಾತ್ಮ – ಪರಮಾತ್ಮರ ಸಂಯೋಗವೆಂದೂ ಇಲ್ಲಿಯ ಪ್ರವಚನಕಾರರು ಅರ್ಥಮಾಡುತ್ತಾರೆ. ಈ ವಿಷಯವನ್ನು ಕುರಿತು ಶ್ರೀಮದ್ಭಾಗವತದಲ್ಲಿ ಸ್ಫುಟವಾಗಿ ಹೇಳಲಾಗಿದೆ. ಪ್ರತಿಯೊಂದಕ್ಕೂ ಸ್ಥೂಲಾರ್ಥ – ಸೂಕ್ಷ್ಮಾರ್ಥ ಎಂಬ ಭೇದಗಳು

(28ನೇ ಪುಟ ನೋಡಿ)

# ಯುವವಾಣಿ

# ಸಂಸ್ಕೃತಿ

ಸಂಸ್ಕೃತಿ ಮಾತಿನ ಅರ್ಥ ಅತಿ ವ್ಯಾಪಕವಾದದ್ದು. ಈ ಮಾತನ್ನು ವಿವರಿಸುವುದಕ್ಕೆ ಬದಲಾಗಿ ಈ ಮಾತಿನ ಅರ್ಥವನ್ನು ಹುಡುಕುತ್ತ ಹೋದಹಾಗೆ ಇನ್ನೂ ಹೆಚ್ಚಿನ ಅರ್ಥಗಳು, ಸಂಗತಿಗಳು ಸ್ಫುರಿಸಿ ನಮ್ಮ ಆಲೋಚನಾಕ್ಷಿತಿಜ ಮತ್ತಷ್ಟು ವಿಸ್ತಾರಗೊಳ್ಳುತ್ತಾ ಹೋಗುತ್ತದೆ.

ವಿಶ್ವಸೃಷ್ಟಿಯಾದಂದಿನಿಂದ ಇಂದಿನವರೆಗೆ ಮಾನವ ಕುಲದ ಅನುಭವ, ಆಲೋಚನೆ, ನಂಬಿಕೆ, ಮತ್ತು ನಡವಳಿಕೆಗಳು – ಇವುಗಳನ್ನೇ ನಾವು ಸಂಸ್ಕೃತಿಯ ಮೂಲವೆಂದು ತಿಳಿಯಬಹುದು. ಭಗವಂತ ತನ್ನ ಸೃಷ್ಟಿಯಲ್ಲಿ ಮಾನವನಿಗೆ ವಿಶೇಷವಾದ ಸೌಲಭ್ಯಗಳನ್ನು ಒದಗಿಸಿದ್ದಾನೆ. ಪ್ರಾಣಿಗಳಿಗೆ ಲಭ್ಯವಾಗದ ಮಾತು, ಭಾಷೆ, ಭಾವೋದ್ವೇಗದ ಅಭಿವ್ಯಕ್ತಿ – ಇವುಗಳು ಮಾನವನ ಪಾಲಿಗೆ ಬಂದಿರುವ ಅಮೃತಫಲಗಳು. ದೇವರ ವರವಾಗಿ ಬಂದ ಈ ಶಕ್ತಿಗಳನ್ನು ಮಾನವ ಸಾರ್ಥಕವಾಗಿ ಬಳಸಿಕೊಂಡು ತನ್ನ ವ್ಯಕ್ತಿತ್ವ, ಕುಟುಂಬ ಮತ್ತು ಸಾಮಾಜ ಇವುಗಳನ್ನು ಸುಂದರವಾಗಿ ನಿರ್ಮಿಸುತ್ತ ಹೋಗುವುದೇ ಸಂಸ್ಕೃತಿಯಾಗಿದೆ. ನಾವು ನಮ್ಮ ಹಿಂದಿನವರು ಬಿಟ್ಟು ಹೋದ ಅನುಭವ, ಗ್ರಂಥರಾಶಿ ಇವುಗಳನ್ನು ಬಳಸಿಕೊಂಡು ಬೆಳೆಸಿಕೊಂಡು ಬದುಕುತ್ತಿದ್ದೇವೆ. ನಾವು ಮುಂದೂ ಇದನ್ನೇ ಮಾಡಬೇಕಾಗಿದೆ. ನಾವು ಸುಖವಾಗಿರುವುದರ ಜೊತೆಗೆ ನಮ್ಮ ಅಕ್ಕ ಪಕ್ಕದವರ ಸಮಾಜದ, ದೇಶದ ಸುಖ ಸಂತೋಷಗಳನ್ನು ಬಯಸುತ್ತ ಆ ದಿಕ್ಕಿನಲ್ಲಿ ನಮ್ಮ ಕರ್ತವ್ಯ, ಕಾಣಿಕೆಗಳನ್ನು ಸಲ್ಲಿಸುತ್ತ ಹೋಗುವುದೇ ಸಂಸ್ಕೃತಿಯ ಸಾರ. ವ್ಯಕ್ತಿ, ಕುಟುಂಬ ಮತ್ತು ಸಮಾಜ–ಇವು ಪರಸ್ಪರ ಪೂರಕವಾಗಿದ್ದು ಶಾಶ್ವತ ಸಂಬಂಧಹೊಂದಿರುವುದರಿಂದಲೇ ನಮ್ಮ ಪ್ರಾಚೀನ ಸಂಸ್ಕೃತಿ ನಿರಂತರವಾಗಿ ಹರಿದುಕೊಂಡು ಬಂದಿದೆ.

"ಧರ್ಮ" "ದೇವರು" "ಮೋಕ್ಷ" ಈ ಮಾತುಗಳಿಗಿರುವ ವಿಶಾಲ ಅರ್ಥಗಳಂತೆ 'ಸಂಸ್ಕೃತಿ' ಪದವೂ ವಿಶಾಲಾರ್ಥವುಳ್ಳದ್ದು. ನಮ್ಮ ದೃಷ್ಟಿಯಲ್ಲಿ ಸಂಸ್ಕೃತಿ ಎಂದರೆ ಎಲ್ಲ ಒಳ್ಳೆಯಗುಣಗಳ ಸಮ್ಮಿಳನ. ವಿನಯ, ಸಭ್ಯತೆ, ಕೃತಜ್ಞತೆ, ವಿಚಾರವಂತಿಕೆ, ಪ್ರೀತಿ, ವಿಶ್ವಾಸ, ನಂಬಿಕೆ, ತ್ಯಾಗ, ದಯೆ, ಅನುಕಂಪ, ಸತ್ಯವಾದಿತ್ವ, ಸ್ನೇಹಭಾವ, ಔದಾರ್ಯ, ಶುಚಿತ್ವ, ದೇಶಭಾಷಾಭಿಮಾನ ಈ ಎಲ್ಲ ಸದ್ಗುಣಗಳ ಸಂಪತ್ತನ್ನು ಸಂಸ್ಕೃತಿ ಎಂದು ಕರೆಯಬಹುದಾಗಿದೆ.

'ಸಂಸ್ಕೃತಿ' ಎಂಬ ಪದಕ್ಕೆ ಇತಿಹಾಸಕಾರರು, ದಾರ್ಶನಿಕರು, ತತ್ತ್ವಜ್ಞಾನಿಗಳು, ರಾಜನೀತಿ ಕೋವಿದರು, ಸಾಹಿತಿಗಳು ಕಲೆಗಾರರು, ಮೊದಲಾದವರು ನಾನಾರೀತಿಯಲ್ಲಿ ಅರ್ಥಗಳನ್ನು ಹೇಳಿದ್ದಾರೆ.

"ಸಂಸ್ಕೃತಿಯು ಬರಿಯ ಪಾಂಡಿತ್ಯವಲ್ಲ ಅದು ವಿವೇಚನೆ– ಜೀವನದ ಪರಿಜ್ಞಾನ" ಎಂದಿದ್ದಾರೆ ಡಾ|| ರಾಧಾಕೃಷ್ಣನ್. ವಿದ್ಯಾವಂತನಾದ ಮಾತ್ರಕ್ಕೆ ಸುಸಂಸ್ಕೃತನಾಗಲಾರ. ತಾನು ಪಡೆದ ವಿದ್ಯೆಯಿಂದ ಮನಸ್ಸು ಆಲೋಚನೆ ಹೃದಯ ಸಂಸ್ಕಾರಗೊಳ್ಳಬೇಕು. ಸಂಸ್ಕೃತಿ ಎನ್ನುವುದು ವೇಶ ಭೂಷಣಗಳಲ್ಲಿ ಅಡಗಿಲ್ಲ. ಅದು ಬಾಹ್ಯಕ್ಕಿಂತಲೂ ಹೆಚ್ಚಾಗಿ ಅಂತರಂಗದ ವಿಷಯವಾಗಿದೆ. ವ್ಯಕ್ತಿ ತನ್ನ ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿಯೂ ಯುಕ್ತಾಯುಕ್ತ ಆಲೋಚನೆ ಮಾಡಬೇಕು. ತನ್ನ ನಡತೆಯನ್ನು ಪರಿಶೀಲನೆಗೆ ಒಳಪಡಿಸಬೇಕು. ಹಾಗೆ ವಿವೇಚಿಸುತ್ತ, ವಿಮರ್ಶಿಸುತ್ತ ತನ್ನ ನಡತೆಯನ್ನು ತಿದ್ದಿಕೊಳ್ಳಬೇಕು. ಹಾಗೆ ತಿದ್ದಿಕೊಂಡ ಬದುಕಿನಲ್ಲಿ ಸಂಸ್ಕೃತಿಯ ಕಿರಣಗಳು ಹೊಳೆದು ಆತ್ಮ ಪರಿಶುದ್ಧವಾಗುತ್ತದೆ.

ವ್ಯಕ್ತಿ ಮೊದಲು ತನ್ನ ನಡವಳಿಕೆಯನ್ನು ತಿದ್ದಿಕೊಳ್ಳಬೇಕು. ಆದ್ದರಿಂದಲೇ ಬಸವಣ್ಣನವರು ಹೇಳಿರುವುದು,

ಲೋಕದ ಡೊಂಕ ನೀವೇಕೆ
ತಿದ್ದುವಿರಯ್ಯ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ

ಮೊದಲು ತನ್ನಲ್ಲಿರುವ ತಪ್ಪನ್ನೆಲ್ಲಾ ತಿದ್ದಿಕೊಳ್ಳುವುದೇ ಸುಸಂಸ್ಕೃತನ ಲಕ್ಷಣ. ಹೇಗೆ ತಿದ್ದಿಕೊಳ್ಳುವುದು?

ಕಳಬೇಡ ಕೊಲಬೇಡ ಹುಸಿಯ
ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ
ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲು
ಬೇಡ
ಇದೇ ಅಂತರಂಗ ಶುದ್ಧಿ, ಇದೇ
ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮ
ದೇವರನೊಲಿಸುವ ಪರಿ

ಇಲ್ಲಿ ನಮ್ಮ ನುಡಿಯಲ್ಲಿ ವ್ಯಕ್ತವಾಗುವ ಸಂಸ್ಕೃತಿ ಎಂತಹುದಾಗಿರಬೇಕೆಂಬುದನ್ನು ಬಸವಣ್ಣನವರು ಸುಂದರವಾಗಿ ತಿಳಿಸಿದ್ದಾರೆ. ಈ ಮಾತಿನಲ್ಲಿ ನಮ್ಮ ನಡತೆ ಹೇಗಿರಬೇಕೆಂಬುದು ವ್ಯಕ್ತವಾಗಿದೆ. ನಮ್ಮ ಪ್ರತಿಯೊಂದು ನಡೆ ನುಡಿಯಲ್ಲಿ ಪ್ರೀತಿ, ವಿಶ್ವಾಸ, ನಯ ವಿನಯಗಳು ಕಾಣುತ್ತಿರಬೇಕು. ನಮ್ಮ ನುಡಿಯ ಸೌಂದರ್ಯ ಹೇಗಿರಬೇಕೆಂಬುದನ್ನು ಬಸವಣ್ಣನವರು,

ಶ್ರೀ ಚಿ. ನ. ಕೃಷ್ಣಮೂರ್ತಿ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ—517501

"ಮೃದುವಚನವೇ ಸಕಲ ಜಪಂಗಳಯ್ಯಾ, ಮೃದುವಚನವೇ ಸಕಲ ತಪಂಗಳಯ್ಯಾ, ಸದಾ ವಿನಯವೇ ಸದಾಶಿವನ ಒಲುಮೆಯಯ್ಯಾ" ಎಂದಿದ್ದಾರೆ. ನಮ್ಮ ಮಾತು ಹೇಗಿರಬೇಕೆಂದರೆ "ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು", "ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕ"- ನಾವಾಡುವ ಪ್ರತಿ ಮಾತಿನಲ್ಲಿ ನಯ, ವಿನಯ, ಮೃದುತ್ವ, ಲಾಲಿತ್ಯಗಳು ಸ್ಪಷ್ಟವಾಗಿ ಕಾಣುತ್ತಿರಬೇಕು. ಅದೇ ನಿಜವಾದ ಸಂಸ್ಕೃತಿಯ ಲಕ್ಷಣ. ನಮ್ಮ ಮಾತು ಪ್ರಿಯವಾಗಿದ್ದರೆ ಸಾಲದು. ಸತ್ಯದಿಂದ ಕೂಡಿರಬೇಕು. "ಹರನೆಂಬುದೇ ಸತ್ಯ ಸತ್ಯವೆಂಬುದೇ ಹರನು" ಎಂದು ಸಾರಿದ ಹರಿಶ್ಚಂದ್ರನ ಸತ್ಯವಂತಿಕೆ ನಮ್ಮ ಆದರ್ಶವಾಗಿರಬೇಕು.

ಸತ್ಯವೆಂಬುದೆ ತಾಯಿ ತಂದೆ
ಸತ್ಯವೆಂಬುದೆ ಬಂಧು ಬಳಗವು
ಸತ್ಯವಾಕ್ಯಕೆ ತಪ್ಪಿ ನಡೆದರೆ
ಮೆಚ್ಚನಾ ಜಗದೀಶನು

ಎಂದು ಸತ್ಯವಾದಿನಿ ಗೋವು ಸಾರಿದ ಸತ್ಯ ಸಂದೇಶ ಸದಾ ನಮ್ಮ ಕಿವಿಗಳಲ್ಲಿ ಅನುರಣಿತವಾಗುತ್ತಿರಬೇಕು. ಮಾನವ ಸಮಾಜಜೀವಿ, ಅವನು ಬದುಕುತ್ತಿರುವ ಸಮಾಜ ಶುದ್ಧಗೊಳ್ಳಬೇಕಾದರೆ ಪ್ರತಿಯೊಬ್ಬರೂ ತಮ್ಮ ನಡವಳಿಕೆಯಲ್ಲಿ ಸತ್ಯವಂತರಾಗಿರಬೇಕು.

ಈ ಒಂದು ಗುಣವನ್ನು ಬೆಳೆಸಿಕೊಂಡರೆ ಆದರ ಜೊತೆಯಲ್ಲಿ ಇನ್ನೂ ಅನೇಕ ಸದ್ಗುಣಗಳು ತಾನಾಗಿ ಕೂಡಿಕೊಂಡು ಮನುಷ್ಯಕುಲದ ಬಾಳು ಹಸನಾಗುವುದರ ಜೊತೆಗೆ ಸಂಸ್ಕೃತಿಯನ್ನು ಕಾಪಾಡಿದ ಕೀರ್ತಿಯೂ ಒಂದು ಜನಾಂಗಕ್ಕೆ ಲಭಿಸುತ್ತದೆ.

ಸಂಸ್ಕೃತಿ ಮತ್ತು ಧರ್ಮ ಇವೆರಡೂ ಬೇರೆಯಲ್ಲ. ಪರಸ್ಪರ ಪೂರಕವಾಗಿದ್ದು ಹೊಂದಿಕೊಂಡಿರುವಂತಹದು. ಧರ್ಮವನ್ನು ಆಚರಣೆಯಲ್ಲಿ ತರುವುದರ ಫಲವೇ ಸಂಸ್ಕೃತಿ. ಪ್ರಪಂಚದಲ್ಲಿ ಅನೇಕ ಧರ್ಮಗಳಿವೆ. ನಮ್ಮ ದೇಶದಲ್ಲಿ ಹಿಂದೂ, ಬೌದ್ಧ, ಜೈನ ಧರ್ಮಗಳ ಚರಿತ್ರೆ ನಮ್ಮ ಸಂಸ್ಕೃತಿಯ ಚರಿತ್ರೆಯೇ ಆಗಿದೆ. ಪ್ರತಿಯೊಂದು ಧರ್ಮವೂ ಮಾನವನ ನಡವಳಿಕೆಯನ್ನು ಉತ್ತಮಗೊಳಿಸಿಕೊಳ್ಳಬೇಕಾದ ಉತ್ತಮ ವಿಚಾರಗಳನ್ನೇ ಹೇಳಿದ್ದು ಅವುಗಳ ಪಾಲನೆಯಿಂದಲೇ ಮನುಷ್ಯ ಮೋಕ್ಷವನ್ನು ಪಡೆಯಬಲ್ಲ ಎಂದಿವೆ. ಆದ್ದರಿಂದ ಧರ್ಮಾನುಷ್ಠಾನದಿಂದಲೇ ಸಂಸ್ಕೃತಿಯ ಸಾಕ್ಷಾತ್ಕಾರ. ಸಾವಿರಾರು ವರ್ಷಗಳ ಹಿಂದೆಯೇ ಉಪನಿಷತ್ತುಗಳು "ನಿನ್ನನ್ನು ನೀನು ಅರಿ" ಎಂದು ಬೋಧಿಸಿದವು. ಅದೇ ಅಂತರಂಗದ ಪರಿವೀಕ್ಷಣೆ. ಆದರೆ ಇದನ್ನು ಒಪ್ಪದ ಮೂಢನಂಬಿಕೆಗಳಿಗೆ ಒಳಗಾಗಿದ್ದ ಜನ ಬಹಿರಾಡಂಬರಗಳಿಗೆ ಹೆಚ್ಚು ಬೆಲೆ ನೀಡಿದರು. ತತ್ಫಲವಾಗಿ ನೊಂದರು. ಈಗಲೂ ಧರ್ಮದ ಹೆಸರಿನಲ್ಲಿ ಮೂಢ ನಂಬಿಕೆಗಳು ಅರ್ಥವಿಲ್ಲದ ಗೊಡ್ಡು ಸಂಪ್ರದಾಯಗಳು ಜನತೆಯನ್ನು ವಂಚಿಸುತ್ತಿವೆ. ಸಮಾಜದ, ರಾಷ್ಟ್ರದ ಪ್ರಗತಿಗೆ ಕಂಟಕಗಳಾಗಿವೆ. ಅತಿದೊಡ್ಡ ಪರಂಪರೆಯಲ್ಲಿ ಬೆಳೆದು ಬಂದಿರುವ ನಾವು ಅವುಗಳನ್ನು ನಿವಾರಿಸಿ ಜನತೆಯಲ್ಲಿ ನಿಜವಾದ ಧಾರ್ಮಿಕ ಕಲ್ಪನೆಯನ್ನುಂಟು ಮಾಡಬೇಕಾಗಿದೆ.

ಪ್ರಪಂಚದ ಇತಿಹಾಸದಲ್ಲಿಯೇ ನಮ್ಮ ಭಾರತವರ್ಷವು ಅತ್ಯಂತ ಪ್ರಾಚೀನವೂ ಪವಿತ್ರವೂ ಆಗಿದೆ. ವೇದಗಳ ಕಾಲದಿಂದಲೇ ನಮ್ಮ ದೇಶದಲ್ಲಿ ಶ್ರೇಷ್ಠವಾದ ಸಂಸ್ಕೃತಿ ಬೆಳೆದು ಬಂದಿದೆ. ಬಿಡಿಸಲಾರದ ಒಗಟು ಎನಿಸಿರುವ ಜೀವನದ ಅರ್ಥವನ್ನು ಹುಡುಕುತ್ತ ಬದುಕಿನ ಸಾಫಲ್ಯವನ್ನು ಕಂಡುಕೊಳ್ಳುವ ಮಾರ್ಗವೇ ನಮ್ಮ ಸಂಸ್ಕೃತಿಯ ತಿರುಳಾಯಿತು. ಧರ್ಮ, ಅರ್ಥ ಕಾಮ, ಮೋಕ್ಷಗಳನ್ನು ಸಾಧಿಸುವುದೇ ಬದುಕಿನ ಉದ್ದೇಶವಾಯಿತು. ಭಾರತೀಯ ಸಂಸ್ಕೃತಿ ಅನೇಕ ಸಲ ಆಘಾತಗಳನ್ನು ಸಹಿಸಿಯೂ ಅನಂತವಾಗಿ ಸಾಗಿದೆ. ವಿದೇಶೀಯರ ಆಕ್ರಮಣ, ಆಂತರಿಕ ದ್ವೇಷ, ಕಲಹ, ಮತಧರ್ಮಗಳ ಹೊಡೆದಾಟ, ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ವಿಜ್ಞಾನದ ಪ್ರಭಾವ, ಎಲ್ಲವನ್ನು ಎದುರಿಸಿ ನಮ್ಮ ಸಂಸ್ಕೃತಿ ಮುಂದೆ ಸಾಗಿದೆ. ಇದಕ್ಕೆ ಕಾರಣ ನಮ್ಮ ಸಂಸ್ಕೃತಿ

ಯಲ್ಲಿ ಅಡಗಿರುವ 'ವಿಶಾಲವಾದ ಮನೋಭಾವ. ಮಾನವತೆಯ ಶ್ರೇಷ್ಠ ಆದರ್ಶಗಳೆಲ್ಲವೂ ನಮ್ಮ ಸಂಸ್ಕೃತಿಯಲ್ಲಿ ಅಡಗಿವೆ.

ನಿರಹಂಕಾರ, ತ್ಯಾಗ, ಕರುಣೆ, ಪ್ರೀತಿ, ವಿಶ್ವಾಸ, ನಂಬಿಕೆ, ದೈವಶ್ರದ್ಧೆ, ಧರ್ಮಾಜರಣೆ, ಶುದ್ಧಚಾರಿತ್ರ್ಯ, ಪರೋಪಕಾರ, ಸಹಿಷ್ಣುತೆ, ಸಮಭಾವನೆ — ಇವೆಲ್ಲವೂ ನಮ್ಮ ಸಂಸ್ಕೃತಿಯ ಜೀವಾಳವಾಗಿದೆ. ವೇದ, ಉಪನಿಷತ್ತು, ಪುರಾಣ, ರಾಮಾಯಣ, ಮಹಾಭಾರತ, ಭಗವದ್ಗೀತೆ ಮೊದಲಾದವು ನಮ್ಮ ಸಂಸ್ಕೃತಿಯ ಭಂಡಾರವಾಗಿವೆ. ನಮ್ಮ ಶಾಸ್ತ್ರಗಳಲ್ಲಿ

"ಏಕಂಸತ್ ವಿಪ್ರಾ ಬಹುಧಾ ವದಂತಿ"

ಮಾತೃದೇವೋಭವ; ಪಿತೃದೇವೋಭವ,
ಆಚಾರ್ಯದೇವೋಭವ; ಅತಿಥಿದೇವೋಭವ

ಎಂಬ ವೇದವಾಕ್ಯಗಳು, 'ಸತ್ಯಂವದ ಧರ್ಮಂಚರ' 'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ'— ಇಂತಹ ಲಕ್ಷಗಟ್ಟಲೆ ಅಮೂಲ್ಯವಾದ ಮಾತುಗಳನ್ನು ಋಷಿಗಳು, ಕವಿಗಳು, ದಾರ್ಶನಿಕರು ಹೇಳಿದ್ದಾರೆ. ಇಂದಿಗೂ ಅವರ ನುಡಿಗಳೇ ನಮ್ಮ ಬದುಕಿಗೆ ಬೆಳಕು ತೋರುತ್ತಿದೆ.

ಕನ್ನಡದಲ್ಲಿ ಶಿವಶರಣರು, ದಾಸರು, ಕವಿಶ್ರೇಷ್ಠರು, ಸಂಸ್ಕೃತಿಯ ಲಕ್ಷಣಗಳನ್ನು ಹೇಳಿದ್ದಾರೆ. ನಮ್ಮ ಪ್ರಾಚೀನ ಸಂಸ್ಕೃತಿ ಬಲವಾಗಿ ಉಳಿಯಬೇಕಾದರೆ ಸಮಾಜ ರಾಷ್ಟ್ರ, ಅವುಗಳನ್ನು ಆಚರಣೆಯಲ್ಲಿ ತರಬೇಕು.

"ದಯೆಯಿಲ್ಲದ ಧರ್ಮವಾವುದಯ್ಯ;
ದಯೆ ಬೇಕು
ಸಕಲ ಪ್ರಾಣಿಗಳಲ್ಲಿ, ದಯೆಯೇ
ಧರ್ಮದ ಮೂಲವಯ್ಯ"

'ಕಾಯಕವೇ ಕೈಲಾಸ
ಮೃದುವಚನಂಗಳೇ ಸಕಲ ಜಪಂಗಳು'

'ಮರ್ತ್ಯಲೋಕವೆಂಬುದು ಕರ್ತಾರನ
ಕಮ್ಮಟ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು'

'ಹುತ್ತವ ಬಡಿದೊಡೆ ಹಾವು ಸಾಯಬಲ್ಲದೆ
ಅಯ್ಯಾ
ಅಘೋರತಪವ ಮಾಡಿದೊಡೇನು?
ಅಂತರಂಗ–ಆತ್ಮಶುದ್ಧಿ ಇಲ್ಲದವರೆನೆಂತು
ನಂಬುವನಯ್ಯಾ ಕೂಡಲ
ಸಂಗಮದೇವ'

'ಸಾರ, ಸಜ್ಜನರ ಸಂಗವ ಮಾಡುವುದು
ದೂರ, ದುರ್ಜನರ ಸಂಗ ಬೇಡವಯ್ಯಾ'

'ಹೊಲೆಯ ಹೊರಗಿಹನೇ
ಊರೊಳಗಿಲ್ಲವೆ
ಶ್ರೀ ಹರಿಯನಾಮವನು ಬಲ್ಲವರು ಹೇಳಿ'

'ಸ್ನಾನ ಮಾಡಿರೊ ಜ್ಞಾನತೀರ್ಥದಲಿ
ನಾನು ನೀನೆಂಬ ಅಹಂಕಾರವ ಬಿಟ್ಟು'

— ಶರಣರ, ದಾಸರ, ಇಂತಹ ನುಡಿಗಳು ಸಂಸ್ಕೃತಿಯ ತಿರುಳಾಗಿವೆ.

ರಾಮಾಯಣ, ಮಹಾಭಾರತಗಳಲ್ಲಿನ ಪಾತ್ರಗಳು, ಸನ್ನಿವೇಶಗಳು ನಮ್ಮ ಸಂಸ್ಕೃತಿಯ ಹಿರಿಮೆ ಗರಿಮೆಗಳನ್ನು ತಿಳಿಸುತ್ತವೆ. ಆ ಕಾವ್ಯಗಳಲ್ಲಿನ ಆದರ್ಶಗಳೇ ನಮ್ಮ ಸಮಾಜ ಮತ್ತು ಸಂಸ್ಕೃತಿಯನ್ನು ಇಂದಿನವರೆಗೂ ಕಾಪಾಡಿಕೊಂಡು ಬಂದಿವೆ.

ಶ್ರೀರಾಮನ ಪಿತೃಭಕ್ತಿ, ಸತ್ಯಸಂಧತೆ, ಪರನಾರೀ ಸಹೋದರತ್ವ, ದಶರಥ ಮಹಾರಾಜನ ಪುತ್ರವಾತ್ಸಲ್ಯ, ಪುತ್ರಪ್ರೇಮ, ಸೀತಾದೇವಿಯ ಪಾತಿವ್ರತ್ಯ, ಭರತ ಲಕ್ಷ್ಮಣರ ಸಹೋದರ ಪ್ರೇಮ, ಶಬರಿಯಶ್ರದ್ಧಾಪೂರ್ವಕ ಭಕ್ತಿ, ಹನುಮಂತನ ಸ್ವಾಮಿಭಕ್ತಿ, ವಿಭೀಷಣನ ನೀತಿ ಪರತೆ, ಇವೆಲ್ಲವೂ ಉನ್ನತವಾದ ಭಾರತೀಯ ಆದರ್ಶಗಳಾಗಿವೆ. ತಮ್ಮ ಅಕೃತ್ಯ, ಅಧರ್ಮ, ಅನೀತಿ, ಹಿಂಸೆಗಳಿಂದ ನಾಶಗೊಂಡ ರಾವಣ, ದುರ್ಯೋಧನ, ದುಶ್ಶಾಸನರುಗಳು ಭಾರತೀಯ ಜನಮನದಲ್ಲಿ ಕೆಡಕಿನ ಸಂಕೇತಗಳಾಗಿದ್ದಾರೆ.

ಭಾರತ ಇತಿಹಾಸವನ್ನು ಸಮೀಕ್ಷಿಸಿದರೂ ನಮ್ಮ ದೇಶವನ್ನು ಆಳಿದ ರಾಜಮಹಾರಾಜರುಗಳಲ್ಲಿ ಅನೇಕರು ನಮ್ಮ ನಾಡಿನ ಸಂಸ್ಕೃತಿ ಸಂವರ್ಧನೆಗಾಗಿ ಅನೇಕ ರಚನಾತ್ಮಕ ಕೆಲಸಗಳನ್ನು ನಿರ್ವಹಿಸಿರುವುದು ಕಂಡು ಬರುತ್ತದೆ.

ಆಧುನಿಕ ಕಾಲದಲ್ಲಿ ಮಹಾಪುರುಷರುಗಳಾದ ಲೋಕಮಾನ್ಯ ತಿಲಕರು, ಅರವಿಂದ ಘೋಷರು, ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಸ್ವಾಮಿ ರಾಮತೀರ್ಥ, ಈ ಮೊದಲಾದವರು ನಮ್ಮ ಸಂಸ್ಕೃತಿಯ ಪರಂಪರೆಯನ್ನು ಸರಿಯಾಗಿ ಗ್ರಹಿಸಿ ಅವುಗಳಿಂದ ಸ್ಫೂರ್ತಿ ಪಡೆದು ಜನಸಮೂಹಕ್ಕೆ ತಮ್ಮ ಉಪದೇಶ ಆಚರಣೆಗಳ ಮೂಲಕ ನಮ್ಮ ಸಂಸ್ಕೃತಿಯ ಹಿರಿಮೆಯನ್ನು ಸಾರಿದರು.

ಸಂಗ್ರಹವಾಗಿ ಹೇಳುವುದಾದರೆ 'ಸಂಸ್ಕೃತಿ' ಎಂಬುದು ಜೀವನರೀತಿಯೇ ಆಗಿದೆ. ಬದುಕಿನ ಪ್ರತಿಯೊಂದು ಚಟುವಟಿಕೆಯಲ್ಲಿಯೂ, ಕ್ಷೇತ್ರದಲ್ಲಿಯೂ ಸಂಸ್ಕೃತಿ ಆವರಿಸಿದಾಗ ವ್ಯಕ್ತಿಯಲ್ಲಿ ಧರ್ಮ, ನೀತಿ, ಚಾರಿತ್ರ್ಯ, ತ್ಯಾಗ, ಕ್ಷಮೆ, ದಯೆ ಎಲ್ಲ ಗುಣಗಳೂ ಹುಟ್ಟಿ ವಸುಧೆಯೇ ಅವನ ಕುಟುಂಬವಾಗುತ್ತದೆ. ಅವನಲ್ಲಿ ವಿಶ್ವಭ್ರಾತೃತ್ವ, ವಿಶ್ವಶಾಂತಿ– ಈ ಭಾವನೆಗಳು ಹುಟ್ಟುತ್ತವೆ. ವ್ಯಕ್ತಿ ವ್ಯಕ್ತಿಗಳ ನಡುವೆ, ಜನಾಂಗಳ ನಡುವೆ ಇರುವ ದ್ವೇಷಾಸೂಯೆ ವರ್ಗ ಕಲಹ, ವರ್ಣ ಕಲಹ, ಎಲ್ಲವೂ ಅಳಿದು ಪ್ರೀತಿಯೊಂದೇ ಉಳಿದು ಪರಸ್ಪರ ಸ್ನೇಹಭಾವ — ಸಹೋದರ ಭಾವ ಹುಟ್ಟುತ್ತವೆ. ಆದ್ದರಿಂದಲೇ ಗಾಂಧೀಜಿ ಹೀಗೆ ಅಪೇಕ್ಷೆಪಟ್ಟಿದ್ದಾರೆ.

"ಎಲ್ಲ ದೇಶಗಳ ಸಂಸ್ಕೃತಿಗಳೂ ಸೇರಿದ ತಂಗಾಳಿಯು ನನ್ನ ಮನೆಯ ಸುತ್ತಲೂ ಆದಷ್ಟು ಧಾರಾಳವಾಗಿ ಬೀಸಬೇಕೆಂಬುದೇ ನನ್ನ ಅಭಿಲಾಷೆ".

ಇಂದಿನ ಪ್ರಕ್ಷುಬ್ಧ ವಾತಾವರಣದಲ್ಲಿ ಭಾರತೀಯ ಸಂಸ್ಕೃತಿ ಇಡೀ ವಿಶ್ವಕ್ಕೆ ಮಾದರಿಯಾಗಬಲ್ಲದು. ಏಕೆಂದರೆ ನಮ್ಮ ಸಂಸ್ಕೃತಿ ಮುಖ್ಯವಾಗಿ ಮಾನವ ಧರ್ಮವನ್ನು ಸಾರುತ್ತದೆ. ಸರ್ವೇ ಜನಾಸ್ಸುಖಿನೋಭವನ್ತು–ಎಂಬುದು ನಮ್ಮ ಸಂಸ್ಕೃತಿ ಸಾರುವ ಮಂತ್ರವಾಗಿದೆ. ಈ ದೃಷ್ಟಿಯಿಂದ ವಿಶ್ವದ ಅನೇಕ ಸಮಸ್ಯೆಗಳ ಪರಿಹಾರಕ್ಕೆ, ಶಾಂತಿಯುತ ಸಹಬಾಳ್ವೆಗೆ ಭಾರತೀಯ ಸಂಸ್ಕೃತಿ ಮಾರ್ಗದರ್ಶಿಯಾಗಿದೆ.

———

# ತಿ. ತಿ. ದೇವಸ್ಥಾನಗಳು - ಅರ್ಧ ಶತಕದ ಆಡಳಿತ ವ್ಯವಸ್ಥೆ

ಅರ್ಧಶತಕದ ಹಿಂದೆ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವಾನಿರ್ವಹಣೆಯ ಕಾರ್ಯ ಭಾರವನ್ನು ಒಂದು ಸಂಸ್ಥೆಗೆ ಒಪ್ಪಿಸಿದ ಆಂಗ್ಲ ಪ್ರಭುತ್ವವೂ ಸಹ ಆ ಸಂಸ್ಥೆ ದಿನ ದಿನವೂ ಬೆಳೆದು ಇಂದು ಹೀಗೆ ಮೂರು ಹೂವು ಆರು ಕಾಯಿಗಳಾಗಿ ಅಭಿವೃದ್ಧಿ ವಾಗುವುದೆಂದಾಗಲೀ, ಒಂದೊಮ್ಮೆ ಹಾಗೆ ಭಾವಿಸಿದ್ದರೂ, ಆ ಶ್ರೀನಿವಾಸನ ದಯಾ ಸಾಮ್ರಾಜ್ಯ ಆರು ಖಂಡಗಳು ಅರವತ್ತು ದೇಶಗಳಲ್ಲಿ ತನ್ನ ಪ್ರಭಾವವನ್ನು ಬೀರುವು ದೆಂದಾಗಲೀ, ಸೂರ್ಯ ಮುಳುಗದ ಸಾಮ್ರಾಜ್ಯವೆಂಬ ತಮ್ಮ ಇಹ ಪ್ರಭುತ್ವ ವನ್ನು ಕಿರಿದುಗೊಳಿಸಿ ವಿಶ್ವದಲ್ಲಿ ಅಧ್ಯಾತ್ಮ ಸಾಮ್ರಾಜ್ಯವೊಂದನ್ನು ಸ್ಥಾಪಿಸಿ ತರತಮ ಭೇದ ಇಲ್ಲದೆ ಸರ್ವರನ್ನೂ ಸೆಳೆಯುವು ದೆಂದಾಗಲೀ, ಕನಸಿನಲ್ಲಿಯೂ ಭಾವಿಸಿರ- ಲಾರದು.

ಆರಂಭವಾದಂದಿನಿಂದ ಇಂದಿನವರೆಗೆ ಅರ್ಧ ಶತಮಾನದ ಪರಿಪಾಲನಾ ನಿರ್ವಹಣ ಸೇವೆಯಲ್ಲಿ ಪರಿಢವಿಸಿದ ಈ ಸಂಸ್ಥೆಯ ಇಂದಿನ ಸ್ವರ್ಣ ಮಹೋತ್ಸವ ಸಂದರ್ಭದಲ್ಲಿ ಗತವನ್ನು ಕಾಲಾನುಕ್ರಮದಲ್ಲಿ ಪರಿಶೀಲಿಸಿ ದಲ್ಲಿ, ವಾಮನನ ವಿಷ್ಣುರೂಪೀಶಕ್ತಿ ವೆಂಕ ಟೇಶ್ವರನ ಸೇವಾರೂಪದಲ್ಲಿ ಈ ಸಂಸ್ಥೆಯ ಬೆಳವಣಿಗೆಗೆ ಹೇಗೆ ಪ್ರೇರಕವಾಯಿತೆಂಬುದು ತಿಳಿದು ಬರುತ್ತದೆ. ನಡೆಯುವುದು ಮಾಧವ ಸೇವೆಯೇ ಆದರು ಮಾಡುವವರು ಮಾನವರೇ ಆದುದರಿಂದ ಸ್ವಾಮಿಯ ಕರುಣಾಕರ ದೃಷ್ಟಿ ಅತ್ಯಗತ್ಯ. ಅಲ್ಲವಾದಲ್ಲಿ ಮುಖಿಯಲ್ಲಿ ಹುಟ್ಟಿತೆಂಬ ಮಾತಿಗೆ ಮೂಲ ವಾದ ಸಂಸ್ಥೆಗಳೆಷ್ಟಿಲ್ಲ.

ನಿಜಕ್ಕೂ ಇದು ಶ್ರೀ ವೆಂಕಟೇಶ್ವರ ಸಾಮ್ರಾಜ್ಯವೇ. ಎಂತಲೇ ಪ್ರಭುತ್ವಕ್ಕೆ ಇರುವ ಅಂಗ ಪ್ರತ್ಯಂಗಗಳೆಲ್ಲ ಈ ಧಾರ್ಮಿಕ ಪ್ರಭುತ್ವಕ್ಕೂ ಇವೆ. ಶ್ರೀನಿವಾಸ ಪ್ರಭುವಿನ ದರ್ಶನಕ್ಕೆ ಬರುವವರಿಗೆ ಬೇಕಾದದ್ದು, ಸಂಪತ್ತಿಗಿಂತ ಹೆಚ್ಚಾಗಿ ಸಮುಚಿತ್ತದಿಂದ ಕೂಡಿರುವಿಕೆ. ಹಸಿವು ಬಾಯಾರಿಕೆಗಳು ಅಂತರಂಗವನ್ನು ಆವರಿಸಿದ್ದಲ್ಲಿ ಮನಸ್ಸು ಮಾಧವನನ್ನಲ್ಲಿ ನೆಲೆಸುವುದು ಹೇಗೆ? ಎಂತಲೇ ದೇವಸ್ಥಾನಗಳು ತಿರುಮಲೆ, ತಿರುಪತಿ, ತಿರುಚಾನೂರುಗಳಲ್ಲಿ ಆರು ಧರ್ಮಸತ್ರ ಗಳು, ಆರು ಅಧಿಕಾವಾಸ ನಿಲಯಗಳು, ಅನೇಕ ಸಣ್ಣ ಸಣ್ಣ ಮನೆಗಳನ್ನು ನಿರ್ಮಿಸಿದೆ. ದಾಹಶಾಂತಿಗೆ, ಸ್ನಾನಕ್ಕೆ ಗೋಗರ್ಭ, ಪಾಪವಿನಾಶಿನಿ, ಜಲಾಶಯ ಗಳನ್ನು ನಿರ್ಮಿಸಿದೆ. ತಿರುಪತಿಯ ಕಲ್ಯಾಣಿ ಜಲಾಶಯ ನಿರ್ಮಾಣದಲ್ಲೂ ಸಹಾಯ ಮಾಡಿದೆ. ಹಸಿವನ್ನು ತೃಪ್ತಿಗೊಳಿಸಲು ಸ್ವಾಮಿಯ ಅನ್ನಪ್ರಸಾದಗಳೇ ಅಲ್ಲದೆ, ಉಪಾಹಾರ, ಭೋಜನಶಾಲೆಗಳನ್ನೂ ನಿರ್ಮಿಸಿದೆ.

ನಮ್ಮದೆಷ್ಟು ಧಾರ್ಮಿಕೋದ್ಯಮ ವಾದರೂ ವಸ್ತುವಿಜ್ಞಾನ ವಿಷಯ ಪರಿಜ್ಞಾನ ಶಿಕ್ಷಣ ಅಗತ್ಯ. ಎಂತಲೇ ಅರೆ ಶತಕದ ಚರಿತ್ರೆಯಲ್ಲಿ ತಿ. ತಿ. ದೇ. ಆರು ಆಧುನಿಕ ವಿದ್ಯಾಕಾಲೇಜುಗಳು, ಅದರಲ್ಲಿ ಅರ್ಧ ಪ್ರೌಢಶಾಲೆಗಳನ್ನೂ ನಡೆಸುತ್ತಿದೆ. ಇದಲ್ಲದೆ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯ ಸ್ಥಾಪನೆಯಲ್ಲಿ ಕಿಲಕಪಾತ್ರವಹಿಸಿದೆ. ಈಚೆಗೆ ಆರಂಭವಾದ ಪದ್ಮಾವತೀ ಮಹಿಳಾ ವಿಶ್ವ ವಿದ್ಯಾಲಯಕ್ಕೂ ತಿ. ತಿ. ದೇ. ನೆರವು ಇದ್ದೇ ಇದೆ.

ವೈದಿಕ ವಿದ್ಯೆ ಎಂದಕೂಡಲೇ ನೆನಪಿಗೆ ಬರುವುದು ಸಂಸ್ಕೃತ ಭಾಷೆ, ಆದಿ ಮಧ್ಯಮವಾದ ವೈದಿಕ ವಾಙ್ಮಯ. ತಿರುಪತಿಯಲ್ಲಿ ವೇದಪಾಠಶಾಲೆ, ಪ್ರಾಚ್ಯ ವಿದ್ಯಾಕಲಾಶಾಲೆಗಳ ಜೊತೆಗೆ ಹೈದರಾಬಾದಿನ ವೇದಾಂತ ವರ್ಧಿನೀ ಸಂಸ್ಕೃತ ಕಲಾಶಾಲೆಗಳೇ ಅಲ್ಲದೆ ಒಂದು ಪ್ರಾಚ್ಯ ವಿದ್ಯೆಯ ಉನ್ನತ ಪಾಠಶಾಲೆಯೂ ಸಹ ತಿ. ತಿ. ದೇ. ನಿರ್ವಹಣೆಯಲ್ಲಿ ಏರ್ಪಾಡಾಗಿದೆ.

ಯಾತ್ರಿಕರ ಆರೋಗ್ಯ ರಕ್ಷಣೆಗಾಗಿ ತಿ ತಿ ದೇ. ಇಂದು ತಿರುಪತಿ, ತಿರುಚಾನೂರು ಗಳಲ್ಲಿ ಒಟ್ಟು ಮೂರು ಹಾಗೂ ತಿರುಮಲೆ ಯಲ್ಲಿ ಕೇಂದ್ರ ವೈದ್ಯಾಲಯ (ಅಶ್ವಿನಿ) ಗಳನ್ನು ನಿರ್ವಹಿಸುತ್ತಿದೆ. ಇವುಗಳಲ್ಲದೆ ಆಯುರ್ವೇದ ಪರಿಶೋಧನೆಗಳಿಗೆಂದು ಆಯುರ್ವೇದ ಕಲಾಶಾಲೆ, ಯೋಗ

---

ಮರನಂ ಮುಟ್ಟಿದನಿಲ್ಲ, ಮೇಘಘಟೆಯೊಳ್ ಕಾಲ್ಗೋದನಿಲ್ಲಿಲ್ಲ ಭೂ
ಧರಮಂ ದಾಂಟಿದನಿಲ್ಲ ಬಾಂದೊರೆಯೊಳಿಟ್ಟಂ ಕಾಲನಿಲ್ಲಿಲ್ಲ ಭಾ
ಸ್ಕರನಂ ಮಾಯದ ಮಾಣಿ ಸೆಂಡೊಡೆದನಾ ಇಲ್ಲ ಎಂಬಿನಂ ನೀಳ್ದಿದಂ
ತರದಿಂ ಪಾದಮನುರ್ವಿ ಕೊರ್ವಿ ಬಲಿಯಂ ಗೆಲ್ವಾಮನಂ ವಾಮನಂ

– ನೇಮಿನಾಥ ಪುರಾಣ – 6 – 25.

ಬಲಿಯನ್ನು ಗೆಲ್ಲುವ ಮನ ಹೊಂದಿದ ವಾಮನನು ನೋಡನೋಡುತ್ತಿದ್ದಂತೆಯೇ ಬೆಳೆಯುತ್ತಿದ್ದಾನೆ. ಅವನ ಬೆಳವಿಗೆಯ ಕ್ಷಣಕ್ಷಣದ ವಿವರಗಳನ್ನು ನೀಡುತ್ತಿರುವ ಕವಿ ತನ್ನ ಮಾತನ್ನು ತಾನೇ ಅಲ್ಲಗಳೆಯುತ್ತ ಮುಂದುವರೆಯುತ್ತಾನೆ. ಅಷ್ಟು ವ್ಯಾಪಕವಾದದ್ದು ವಾಮನನ ತ್ರಿವಿಕ್ರಮತೆ.



1979 ರಲ್ಲಿ ಆರಂಭವಾದ ತಿರುಮಲೆ – ತಿರುಪತಿ ದೇವಸ್ಥಾನಗಳ ಪರಿಪಾಲನಾ ಭವನ.

ಪರಿಶೋಧನಾಕೇಂದ್ರಗಳೂ ತಿ. ತಿ. ದೇ. ನಿರ್ವಹಣೆಯವೇ. ಶ್ರೀ ವೆಂಕಟೇಶ್ವರ ರಾಮನಾರಾಯಣ ರೂಯಾ ಆಸ್ಪತ್ರೆಯೂ ಸಹ ದೇವಸ್ಥಾನದ ಸಹಯೋಗದಿಂದ ಏರ್ಪಾಡಾದದ್ದೇ.

ಕೇವಲ ತಿರುಪತಿಗೆ ಬಂದವರಿಗೆ ಮಾತ್ರವೇ ವಸತಿಸೌಕರ್ಯ ಕಲ್ಪಿಸಿದರೆ ಸಾಲದೆಂದು, ಧಾರ್ಮಿಕ ಕೇಂದ್ರಗಳೆಲ್ಲ-ದರಲ್ಲೂ ಶೈವ ವೈಷ್ಣವ ಶಾಕ್ತಾದಿ ಭೇದ ಗಳಿಲ್ಲದೆ ಎಲ್ಲ ಕಡೆಯಲ್ಲೂ ತಿ. ತಿ. ದೇ. ನೆರವು ನೀಡಬೇಕೆಂಬ ಭಾವನೆಯಿಂದಾದ ಶ್ರೀನಿವಾಸ ಮಿಷನ್ ಕಾರ್ಯಕ ಮಗಳಲ್ಲಿ ಶ್ರೀಶೈಲ, ಮಹಾನಂದಿ, ಭದ್ರಾಚಲ-ಇನ್ನೂ ಮುಂತಾದ ಪುಣ್ಯಕ್ಷೇತ್ರಗಳಲ್ಲೂ, ಮುಖ್ಯ ನಗರಗಳಲ್ಲೂ ಸ್ಥಾಪಿಸಿದ ಧರ್ಮಸತ್ರಗಳು, ಸಮಾಚಾರ ಕೇಂದ್ರಗಳು, ಕಲ್ಯಾಣ ಮಂಟಪಗಳು ಅವಕಾಶಗಳಿಲ್ಲದೆ ಇತರರಿಗೆ ಒಪ್ಪಿಸಿದವನ್ನು ಬಿಟ್ಟು–ಎಲ್ಲ ಕೇಂದ್ರಗಳೂ ಈಗ ದೇವಸ್ಥಾನಗಳ ಮೂಲಕವೇ ಆಗುತ್ತಿದೆಯೆಂದರೆ ಅದಕ್ಕೆ ಕಾರಣ ಸ್ವಾಮಿಯ ಬಗ್ಗೆ ಭಕ್ತರಿಗೆ ಉಂಟಾಗುತ್ತಿರುವ ಅಚಂಚಲ ಭಕ್ತಿ ವಿಶ್ವಾಸಗಳ ಕೆಜ್ಜಳವೆಂದೇ ಹೇಳಬೇಕು.

ಈ ನಾಡಿಗೆ ಉಸಿರು ವೇದವಾಙ್ಮಯ. ಸುಸ್ವರದೊಡನೆ ವೇದಗಳನ್ನು ಟೇಪ್ ರಿಕಾರ್ಡಿಂಗ್ ಮೂಲಕ ಪರಿರಕ್ಷಿಸುವುದೇ ಅಲ್ಲದೆ, ಕುಮಾರಾಧ್ಯಾಪನ, ಆಲಯಗಳಲ್ಲಿ ವೇದಪಠನಪ್ರಣಾಳಿ, ಇನ್ನೂ ಹಲವು ಕಾರ್ಯಕ್ರಮಗಳು, ವೇದಶಾಸ್ತ್ರಾಗಮ ವಿದ್ವತ್ಸದಸ್ಸು, ಸನ್ಮಾನಗಳು ತಿ. ತಿ. ದೇ. ಗಳ ಕಾರ್ಯಕ್ರಮಗಳಲ್ಲಿ ಹಲವು.

ಧರ್ಮ ಪ್ರಬೋಧ ಕಾರ್ಯಕ್ರಮದಡಿಯಲ್ಲಿ ಬೇಸಗೆ ಶಿಕ್ಷಣ ಶಿಬಿರಗಳು ಆರಂಭವಾಗಿ, ಆರ್ಷಸಂಸ್ಕೃತಿ ಸದಸ್ ಆಗಿ ವಿಸ್ತಾರ ಹೊಂದಿ ಧರ್ಮಪ್ರತಿಷ್ಠಾನವಾಗಿ ರೂಪ ಪಡೆಯಿತು. ಇಂದು ಹಲವಾರು ಪ್ರಾಂತ್ಯಗಳಲ್ಲಿ ನಡೆಯುವ ಧಾರ್ಮಿಕ ಕಾರ್ಯಕ್ರಮಗಳನ್ನು ತಿ. ತಿ. ದೇ. ಹಿಂದೂ ಧರ್ಮ ರಕ್ಷಣ ಸಂಸ್ಥೆ ಸಂಯುಕ್ತವಾಗಿ ನಿರ್ವಹಿಸುತ್ತಿದೆ.

ದೈವಿಕ ಲಲಿತ ಕಲೆಗಳ ವಿಷಯದಲ್ಲೂ ತಿ. ತಿ. ದೇ. ಹಿಂಜರಿದಿಲ್ಲ. ಶ್ರೀ ವೆಂಕಟೇಶ್ವರ ಸಂಗೀತ ನೃತ್ಯಕಳಾಶಾಲೆ, ಶಿಲ್ಪ ಶಿಕ್ಷಣ ಕೇಂದ್ರ, ನಾದಸ್ವರ ವಿದ್ಯಾಲಯಗಳನ್ನು ಸ್ಥಾಪಿಸಿದ್ದೇ ಅಲ್ಲದೆ ಶ್ರೀ ವೆಂಕಟೇಶ್ವರ ಸ್ವಾಮಿಯ ಬಗ್ಗೆ 32000 ಕೀರ್ತನೆಗಳನ್ನು ರಚಿಸಿ ಧನ್ಯನಾದ ತಾಳ್ಳಪಾಕ ಅನ್ನಮಾಚಾರ್ಯ ಹಾಗೂ ಆತನ ವಂಶಸ್ಥರ ಕೀರ್ತನೆಗಳ ಪ್ರಚಾರವನ್ನು ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ವಹಿಸುತ್ತಿದೆ

ಧಾರ್ಮಿಕ ಗ್ರಂಥಗಳ ಪ್ರಸಾರ ವಿಷಯದಲ್ಲೂ ತಿ. ತಿ. ದೇ. ಗಳ ಪ್ರಯತ್ನ ಹಲವು ಹನ್ನೊಂದು ರೂಪಗಳನ್ನು ಧರಿಸಿದೆ. ಶ್ರೀ ವೆಂಕಟೇಶ್ವರ ಪ್ರಾಚ್ಯ ಪರಿಶೋಧನಾಲಯವನ್ನು ಸ್ಥಾಪಿಸಿ ವೇಟೂರಿ ಪ್ರಭಾಕರ ಶಾಸ್ತ್ರಿ, ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ, ಕೊರಾಡ ರಾಮಕೃಷ್ಣಯ್ಯ, ಮಾನವಲ್ಲಿ ರಾಮಕೃಷ್ಣ ಕವಿ, ಡಿ. ಟಿ. ತಾತಾಚಾರ್ಯ ಮೊದಲಾದ ಪಂಡಿತರನ್ನು ಪೋಷಿಸಿ, ಅನೇಕ ಉತ್ತಮ ಆರ್ಷ ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಿದ ತಿ. ತಿ. ದೇ. ಆ ಕಾರ್ಯಕ್ರಮವನ್ನೀಗ ಸಾಮಾನ್ಯ ಜನರ ಕೈಗೆಟುಕುವಂತೆ ಮಾಡುವ ಧಾರ್ಮಿಕಗ್ರಂಥ ಪ್ರಕಟನೆಯ ಕಡೆಗೆ ತಿರುಗಿಸಿದೆ. ಸುಮಾರು ಒಂದು ಕೋಟಿ ರೂಗಳ ಬೆಲೆಯ ಹೊಸ ಯಾಂತ್ರಿಕ ವಿಧಾನಗಳಿಂದ ತಿ. ತಿ. ದೇ. ಮುದ್ರಣಾಲಯವನ್ನು ನವೀಕರಿಸಲಾಗಿದೆ. ವೇದ ವಾಙ್ಮಯವನ್ನು ಪ್ರಜೆಗಳಲ್ಲಿ ಪ್ರಸರಿಸಲು ಅನುವಾಗುವಂತೆ ಋಗ್ವೇದವನ್ನು ಪ್ರಕಟಿಸುತ್ತ ಯಜುರ್ವೇದ ಅಥರ್ವವೇದಗಳ ಪ್ರಕಟನೆಯಲ್ಲೂ ಮುಂದುವರೆಯುತ್ತಿದೆ. ಒಂದೊಮ್ಮೆ ತನ್ನ ಕೇಂದ್ರಗಳಲ್ಲಿ ಮಾತ್ರವೇ ಮಾರಾಟವಾಗುತ್ತಿದ್ದ ಧಾರ್ಮಿಕ ಗ್ರಂಥವಿಕ್ರಯ ಕಾರ್ಯಕ್ರಮ ಇಂದು ನಮ್ಮ ಊರಿನ ಮಧ್ಯದ ಪುಸ್ತಕವಂಗಡಿಗಳಿಗೂ ಬಂದಿವೆ.

ಇಷ್ಟೇಕೆ ಒಂದೊಮ್ಮೆ ದೇವಸ್ಥಾನ ಸಮಾಚಾರ ಪ್ರಸಾರಕ್ಕೆ ಮಾತ್ರ ಸೀಮಿತವಾಗಿ 1949 ರಲ್ಲಿ ಆರಂಭವಾದ ದೇವಸ್ಥಾನದ ಬುಲೆಟನ್ ಕಾಲಕ್ರಮದಲ್ಲಿ ದೇವಸ್ಥಾನಗಳ ಪತ್ರಿಕೆಯಾಗಿ, ಸಪ್ತಗಿರಿಯಾಗಿ ಪರಿವರ್ತನೆ ಹೊಂದಿ, ಇಂದು ಐದು ವಿವಿಧ ಭಾಷೆಗಳಲ್ಲಿ 45 ಸಾವಿರ ಪ್ರತಿಗಳಿಗೂ ಮಿಕ್ಕಿ ಮಾರಾಟವಾಗುತ್ತಿದೆಯೆಂದರೆ ಮಿಕ್ಕ ರಂಗಗಳಲ್ಲಿ

(24ನೆ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯುವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯುವರೆಗೆ ಕೆಲಸಮಾಡುತ್ತದೆ.



# ಗೃಹಲಕ್ಷ್ಮಿ





## ಅಹಲ್ಯಾಬಾಯಿ ಹೋಳ್ಕರ್

**ಜಯಶ್ರೀ ಜಿ. ಭಟ್**

ಭಾರತ ವರ್ಷದ ಇತಿಹಾಸದಲ್ಲಿ ದಕ್ಷತೆಯಿಂದ ರಾಜ್ಯವಾಳಿ, ಪ್ರಜೆಗಳಿಗೆ ತಾಯಿಯೆನಿಸಿ, ಅನೇಕ ಧರ್ಮಕಾರ್ಯಗಳಲ್ಲಿ ಕೀರ್ತಿವಂತಳಾಗಿ ಅವತಾರಸ್ತ್ರೀಯೆಂದು ಪ್ರಸಿದ್ಧಳಾದ ವೀರಮಾತೆಯೇ ಅಹಲ್ಯಾಬಾಯಿ ಹೋಳ್ಕರ್.

ಮಧ್ಯ ಇಂಡಿಯ ಮತ್ತು ಮಾಳವ ಪ್ರಾಂತಗಳಲ್ಲಿ ಮಹಾರಾಷ್ಟ್ರಸರದಾರ ಮಂಡಲದಲ್ಲಿ ಮಲ್ಹಾರರಾಯ ಹೋಳ್ಕರನು ಆಳುತ್ತಿದ್ದನು. ಆತನ ವೀರ ಪುತ್ರನಾದ ಖಂಡೇರಾಯನೆಂಬುವನ ಧರ್ಮಪತ್ನಿಯೇ ಅಹಲ್ಯಾಬಾಯಿ. ಖಂಡೇರಾಯನು ತಂಭೇರಿಯ ಮುತ್ತಿಗೆಯಲ್ಲಿ ಗೆದ್ದು ವೀರಸ್ವರ್ಗವನ್ನೇರಿದನು. ಸುಖದ ಸುಪ್ಪತ್ತಿಗೆಯಲ್ಲಿ ಮೆರೆಯಬೇಕಾಗಿದ್ದ ಅಹಲ್ಯಾಬಾಯಿ ವಿಧವೆದಳು. ಹಿಂದೂಸ್ತ್ರೀಯರಿಗೆ ಪತಿಯೇ ಸೌಭಾಗ್ಯ, ಸರ್ವಸ್ವ–ಅಂತಹ ಪತಿಯನ್ನು ಕಳೆದುಕೊಂಡ ತಾನಿನ್ನು ಬದುಕಿರಲಾರೆನೆಂದು ಚಿತೆಯೇರಲು ಸಿದ್ಧಳಾದಳು. ಮಾವ ಮಲ್ಹಾರರಾಯನ ಬೇಡಿಕೆಯಂತೆ ತನ್ನ ಸಂಕಲ್ಪವನ್ನು ಬಿಟ್ಟುಬಿಡಬೇಕಾಯಿತು. ಅಂತೆಯೇ ಆಕೆ ಪೂಜ್ಯನಾದ ಮಾವನ ಸೇವೆಯಲ್ಲಿಯೂ ತನ್ನ ಮಕ್ಕಳ ಲಾಲನೆ ಪಾಲನೆಯಲ್ಲಿಯೂ ದುಃಖವನ್ನು ಮರೆಯುತ್ತ ಬಂದಳು. ಆದರೆ ಸ್ವಲ್ಪ ಸಮಯದಲ್ಲಿಯೇ ಮಲ್ಹಾರರಾಯನು ವಿಧಿವಶನಾದನು. ಅಹಲ್ಯಾಬಾಯಿಯು ತನಗೊದಗಿದ ವಿಪತ್ಪರಂಪರೆಗಳಿಂದ ಕುಗ್ಗಿ ಹೋದಳು. ಇನ್ನು ಆಕೆಯ ಪಾಲಿಗೆ ಉಳಿದಿರುವುದು ಹತ್ತುವರ್ಷದ ಒಬ್ಬಮಗ ಮತ್ತು ಎಂಟುವರ್ಷದ ಮಗಳು ಮಾತ್ರ.

ರಾಜ್ಯಾಧಿಕಾರವನ್ನು ಮಗ ಮಾಲೇರಾಯನಿಗೆ ಒಪ್ಪಿಸಿದರೂ ಅವನು ಅಪ್ರಾಪ್ತವಯಸ್ಕನಾದುದರಿಂದ ಆಡಳಿತವನ್ನು ತಾನೇ ನೋಡಿಕೊಳ್ಳುತ್ತಿದ್ದಳು. ಒಬ್ಬನೇ ಮಗನಾದ ಆತನಿಗೂ ಬುದ್ಧಿ ವಿಕಲ್ಪಗೊಂಡು ಅವಿವೇಕಿಯಂತೆ ಕ್ರೂರಕೃತ್ಯಗಳೆಸಗುವುದನ್ನು ನೋಡಿ ಕಣ್ಣೀರು ಹಾಕುವುದೊಂದೇ ಆಕೆಯ ಪಾಲಿಗಾಯಿತು. ಹುಚ್ಚು ಹಿಡಿದ ಮಗ ಮಾಲೇರಾಯನು ಅರಮನೆಯ ಊಳಿಗದವನೊಬ್ಬನ ಮೇಲೆ ಸಿಟ್ಟುಗೊಂಡು ಆತನನ್ನು ಕೊಂದು ಬಿಟ್ಟನು. ಮೊದಲೇ ವಿಕಲ್ಪವಾಗಿದ್ದ ಬುದ್ಧಿ ಮತ್ತಷ್ಟು ಪಲ್ಲಟಗೊಂಡು ಅವನ ಪ್ರಾಣವನ್ನೇ ಕೊಂಡು ಹೋಯಿತು. ಇಷ್ಟೊಂದು ವಿಪತ್ತು ಬಂದಾಗ್ಯೂ ಆಕೆಯ ಬುದ್ಧಿ ವಿಕಲ್ಪವಾಗದಿರುವುದು ಆಶ್ಚರ್ಯವೇ ಸರಿ. ಆಕೆಯ ಮನೋದಾರ್ಢ್ಯ, ಸಮಚಿತ್ತ ಎಷ್ಟೊಂದು ಉನ್ನತವಾಗಿತ್ತೆಂದು ಈ ವಿಪತ್ತುಗಳೇ ಒರೆಹಚ್ಚಿ ತೋರಿಸಿಕೊಡುತ್ತವೆ.

ಅಹಲ್ಯಾಬಾಯಿಗೆ ರಾಜ್ಯಭಾರವನ್ನು ತಾನೇ ನೋಡಿಕೊಳ್ಳುವಂತಾಯಿತು. ಪ್ರಜೆಗಳ ಸಂಕಷ್ಟಗಳನ್ನು ಚೆನ್ನಾಗಿ ತಿಳಿಯಬಲ್ಲವಳಾದ್ದರಿಂದ ಅವುಗಳನ್ನು ಪರಿಹರಿಸುವುದೇ ತನ್ನ ಮುಖ್ಯ ಕರ್ತವ್ಯವೆಂದು ಭಾವಿಸಿ ಸುಜನರಿಗೆ ಸುಲಭಳಾಗಿ, ದುರ್ಜನರಿಗೆ ದುರ್ಲಭಳಾಗಿ ರಾಜ್ಯವಾಳುತ್ತ ಬಂದಳು. ತನ್ನಮಾವನವರ ನೆಚ್ಚಿನ ಆಳಾಗಿದ್ದ ತುಕೋಜಿ ಹೋಳ್ಕರನನ್ನು ಪ್ರಧಾನಿಯಾಗಿಯೂ ಸೇನಾಪತಿಯಾಗಿಯೂ ನೇಮಿಸಿದಳು. ಆತನ ಬೆಂಬಲದಿಂದ ಅಹಲ್ಯಾಬಾಯಿಯು ಸೂತ್ರವಾಗಿ ರಾಜ್ಯದಾಡಳಿತವನ್ನು ನಡೆಸಿದಳು.

ದೇಶದಲ್ಲಿ ಠಕ್ಕರ ಮತ್ತು ಪಿಂಡಾರಿಯವರ ಹಾವಳಿ ಅಧಿಕವಾದಾಗ ಅಹಲ್ಯಾಬಾಯಿ ಯಶವಂತರಾಯನೆಂಬ ವೀರನನ್ನು ತಕ್ಕ ಸೈನ್ಯದೊಡನೆ ಕಳುಹಿಸಿದಳು. ಯಶವಂತರಾಯನು ಅವರಲ್ಲಿ ಒಬ್ಬರೂ ಉಳಿಯದಂತೆ ಅಡಗಿಸಿದನು. ಅಹಲ್ಯಾಬಾಯಿಯು ಅವನ ಪರಾಕ್ರಮವನ್ನು ಮೆಚ್ಚಿ ಸಂತೋಷ ಭರಿತಳಾಗಿ ಪ್ರತ್ಯುಪಕಾರವೆಂಬಂತೆ ಆತನಿಗೆ ತನ್ನ ಮುದ್ದು ಕುವರಿಯಾದ ಮುಕ್ತಾಬಾಯಿಯನ್ನು ಕೊಟ್ಟು ವಿವಾಹ ಮಾಡಿದಳು. ಆದರೆ ವಿಧಿಯ ಲೀಲೆಯೇ ಬೇರೆಯೆಂಬಂತೆ ಮುಕ್ತಾಬಾಯಿಯ ಒಂದು ಮಗುವಾಗಿ ಅದು ತೀರಿಕೊಂಡಿತು. ಯಶವಂತರಾಯನೂ ಹಠಾತ್ತನೆ ತೀರಿಕೊಂಡನು. ಮುಕ್ತಾಬಾಯಿಯ ದುಃಖ ಮೇರೆಮೀರಿತ್ತು. ಮಗಳ ದುರವಸ್ಥೆಯನ್ನು ನೋಡಿ ಅಹಲ್ಯಾಬಾಯಿಯ ಹೃದಯ ಮಮ್ಮಲ ಮರುಗಿತು. ಪತಿಯ ಚಿತೆಯನ್ನು ಏರಲು ಸಿದ್ಧಳಾದ ಮಗಳನ್ನು ತಡೆದು 'ಮಗೂ ನನ್ನೊಬ್ಬಳನ್ನೇ ಬಿಟ್ಟು ಹೋಗ ಬೇಡಮ್ಮಾ– ನಿನ್ನ ಧರ್ಮ' ಎಂದು ಗದ್ಗದ ಕಂಠದಿಂದ ಬೇಡಿಕೊಂಡಳು. ಮುಕ್ತಾಬಾಯಿ ತನ್ನ ಇಚ್ಛೆಯಂತೆ ಧೈರ್ಯದಿಂದ ಚಿತೆಯೇರಿದಳು. ಅಹಲ್ಯಾಬಾಯಿ ದುಃಖದಿಂದ ಬೆಂದಳು. ಆಕೆಗೊದಗಿದ ವಿಪತ್ಪರಂಪರೆಗಳಲ್ಲಿ ಎಂತಹ ಧೈರ್ಯಶಾ

ಲಿಯೂ ಕುಸಿದುಬೀಳುವಂತಹವನೇ. ಅಂತಹುದರಲ್ಲಿ ಹೆಂಗಸಾದ ಅಹಲ್ಯಾಬಾಯಿಯು ಎಲ್ಲವನ್ನೂ ಸಹಿಸಿಕೊಂಡು ಪ್ರಜೆಗಳೇ ತನ್ನ ಮಕ್ಕಳೆಂದು ಭಾವಿಸಿ ರಾಜ್ಯಭಾರ ಕ್ರಮವನ್ನು ಚಾಚೂ ತಪ್ಪದೆ ನಿರ್ವಹಿಸಿ ಕೃತಾರ್ಥಳೆನಿಸಿದಳು.

ಅಹಲ್ಯಾಬಾಯಿಯು ಹಿಂದೂ ಆಚಾರ ವ್ಯವಹಾರಗಳಲ್ಲಿ ಶ್ರದ್ಧಾವಂತಳಾಗಿ ಎಲ್ಲರಿಗೂ ಮಾರ್ಗದರ್ಶಕಳಾಗಿದ್ದಳು. ಅರುಣೋದಯಕ್ಕೆ ಒಂದು ಗಂಟೆ ಮುಂಚೆಯೇ ಎದ್ದು ಸ್ನಾನಾದಿಗಳನ್ನು ಮುಗಿಸಿಕೊಂಡು ಭಗವತ್ಪ್ರಾರ್ಥನೆ, ಪೂಜೆ ಪುರಸ್ಕಾರಗಳಲ್ಲಿ ನಿರತಳಾಗುತ್ತಿದ್ದಳು. ಆ ಮೇಲೆ ಮತ ಸಂಬಂಧವಾದ ಗ್ರಂಥಗಳನ್ನು ಓದಿಸಿಕೊಳ್ಳುತ್ತಿದ್ದಳು. ಆಕೆ ಮಿತವೂ ಸಾತ್ವಿಕವೂ ಆದ ಆಹಾರವನ್ನು ಮಾತ್ರ ಸೇವಿಸುತ್ತಿದ್ದಳು. ಆಕೆ ಆಡಂಬರವಿಲ್ಲದ ಉಡುಪುಗಳನ್ನು ಧರಿಸುತ್ತಿದ್ದಳು.

ಪ್ರಜೆಗಳಿಗೆ ಹೆಚ್ಚು ಕಂದಾಯ ತೆರಿಗೆಯನ್ನು ಹಾಕದೆ, ದುಂದು ವೆಚ್ಚ ಮಾಡದೆ ರಾಜ್ಯದಲ್ಲಿ ಹಲವಾರು ಸುಧಾರಣೆಗಳನ್ನು ಮಾಡಿದಳು. ದೇಶವು ಸುಭಿಕ್ಷದಿಂದಲೂ ಶಾಂತಿಯಿಂದಲೂ ಕೂಡಿತ್ತು. ಆಕೆಯ ಗುಣವನ್ನೂ, ಸಾಮರ್ಥ್ಯವನ್ನೂ, ರಾಜ್ಯಭಾರ ವಿಚಕ್ಷಣೆಯನ್ನೂ, ಎಲ್ಲರೂ ಕೊಂಡಾಡುವಂತಾಯಿತು. ಈ ಧರ್ಮಪರಾಯಣಿ ಸ್ತ್ರೀ ಮೂವತ್ತು ವರ್ಷಗಳ ಕಾಲ ರಾಜ್ಯವಾಳಿ ತನ್ನ ಅರವತ್ತನೇ ವರ್ಷದಲ್ಲಿ ಎಂದರೆ ಕ್ರಿ. ಶ. 1795 ನೆಯ ಸಂವತ್ಸರದಲ್ಲಿ ಪರಲೋಕವಾಸಿಯಾದಳು. ಅಳಿದರೂ ಆಕೆಯ ಕೀರ್ತಿ ಅಜರಾಮರವಾಗಿ ಇತಿಹಾಸದ ಸಂಪುಟಗಳಲ್ಲಿ ಹಚ್ಚಹಸುರಾಗಿ ಕಂಗೊಳಿಸಿ ಸ್ತ್ರೀಸಮಾಜಕ್ಕೇ ದಾರಿದೀಪದಂತೆ ಬೆಳಗುತ್ತಿರುವಳು.

---

(21ನೆ ಪುಟದಿಂದ)

ತಿ. ತಿ. ದೇ. ಪ್ರಗತಿಯನ್ನು ಕುರಿತು ಹೇಳಬೇಕಾಗಿಲ್ಲ.

ಭಾರತದಲ್ಲಿಯೇ ಪ್ರಪ್ರಥಮ ಬಾರಿಗೆ ಆಲಯ ಕಲೆಗಳ ವಸ್ತು ಪ್ರದರ್ಶನವನ್ನು ಸ್ಥಾಪಿಸಿದ ಕೀರ್ತಿ ತಿ. ತಿ. ದೇವಸ್ಥಾನಗಳದ್ದು. ತಿರುಪತಿಯ ಶ್ರೀ ವೆಂಕಟೇಶ್ವರ ದೇವಾಲಯ ವಸ್ತು ಸಂಗ್ರಹಾಲಯ ವಿಶೇಷವಾಗಿ ವೈಷ್ಣವ ದೇವಾಲಯಗಳ ಉಗಮ ಬೆಳವಣಿಗೆಗಳನ್ನು ಮನದಟ್ಟು ಮಾಡಿಕೊಡುತ್ತದೆ. ದೇವಾಲಯಗಳ ನಿರ್ಮಾಣಕ್ಕೆ ಅಗತ್ಯವಾದ ಮಾಹಿತಿಯನ್ನೂ, ವಿಗ್ರಹಗಳ ಬಗ್ಗೆ ಸೂಕ್ತ ಸಲಹೆ, ನಿರ್ದೇಶನಗಳನ್ನೂ ನೀಡುತ್ತದೆ. ತಿರುಮಲೆಯಲ್ಲಿನ ಸಂಗ್ರಹಾಲಯವು ತಿ. ತಿ. ದೇವಸ್ಥಾನಗಳ ಆಡಳಿತ ವ್ಯವಸ್ಥೆಯಲ್ಲಿನ ಇತರ ದೇವಾಲಯ ಬಗ್ಗೆ ವಿವರಗಳನ್ನೂ ನೀಡುತ್ತ ಪ್ರೇಕ್ಷಕನನ್ನು ಮಧ್ಯಕಾಲೀನ ಸಂಸ್ಕೃತಿಯ ದರ್ಶನಕ್ಕೆ ಒಯ್ಯುತ್ತವೆ. ಈ ಎರಡೂ ವಸ್ತುಸಂಗ್ರಹಾಲಯಗಳೂ ತಿ. ತಿ. ದೇವಸ್ಥಾನಗಳ ಬಗ್ಗೆ ಹೆಚ್ಚು ವಿವರವನ್ನು ನೀಡುವಂತಹವು ಎನ್ನಬೇಕು.

ತಿರುಮಲೆಯನ್ನು ಹೆಚ್ಚು ಹೆಚ್ಚು ಆಕರ್ಷಕಗೊಳಿಸಬೇಕೆಂಬ ಉದ್ದೇಶದಿಂದ ಒಂದು ಅರಣ್ಯ ವಿಭಾಗವನ್ನೇ ಉಂಟಾಗಿಸಲಾಗಿದೆ. ಕಾಲಿಕ ಪುಷ್ಪಗಳಿಂದ ಪವಿತ್ರವಾದ ತಿರುಮಲೆ ಯಾತ್ರಿಕರಿಗೆ ಮತ್ತೂ ಉಲ್ಲಾಸದಾಯಿನಿಯಾಗಬೇಕೆಂಬುದು ಇಲ್ಲಿನ ಗುರಿ.

ಇದೆಲ್ಲ ಚೆನ್ನಾಗಿರುವವರಿಗೆ, ಚೆನ್ನಾಗಿ – ಇರುವವರಿಗೆ ಎಟುಕುವ ವಿಧಾನಗಳು. ಸಮಾಜದಲ್ಲಿ ಇವೆಲ್ಲಕ್ಕೂ ದೂರವಾಗಿ ನಿಸ್ಸಹಾಯಕರಾಗಿ ಸಹಾಯಕ್ಕಾಗಿ ಎದುರು ನೋಡುವವರೂ ಇದ್ದಾರೆ. ಅವರಿಗಾಗಿ ಪೂರ್ ಹೋಂನಿಂದ ಆರಂಭವಾದ ಸಂಕ್ಷೇಮ ಕಾರ್ಯಕ್ರಮಗಳು, ಕುಷ್ಠರೋಗ ನಿವಾರಣಾಕೇಂದ್ರ, ಅನಾಥ ಶಿಶುಗಳಿಗಾಗಿ ಬಾಲಮಂದಿರ್, ಅಂಗವಿಕಲರಿಗಾಗಿ ಕೃತ್ರಿಮಾವಯವ ಉತ್ಪಾದನೆ,ಸಹಾಯ,ಉಪಾಧಿ ಶಿಕ್ಷಣಾಲಯಗಳನ್ನು ನಡೆಸುತ್ತಿದೆ.

ಇದು ತಿ.ತಿ.ದೇ.ಗಳ ಅರ್ಧಶತಕ ಪ್ರಗತಿ. ವ್ಯಷ್ಟಿಗೆ ಪರಿಮಿತಿ ಇರುತ್ತದೆ. ಸಮಷ್ಟಿಗೆ ಮಿತಿಯಾವುದು! ಹೆಜ್ಜೆ ಹೆಜ್ಜೆಗೂ ಪರಿವರ್ತನೆ ಶೀಲವಾದ ಸಮಾಜಾವಸರಗಳನ್ನು ಗಮನಿಸಿ ನಿನ್ನೆಯ ಅನುಭವವನ್ನು ಇಂದಿನ ವಾಸ್ತವತೆಯೊಡನೆ ಮೇಳೈಸಿ ಸ್ವೀಕರಿಸಿ ಹಲವು ಮಾತಿನಲ್ಲಿ ಹೆಚ್ಚುಗಾರಿಕೆಯನ್ನು ಹೇಳಿಕೊಳ್ಳದೆ ಮುಂದುವರೆಯುವುದೇ ಕರ್ತವ್ಯ.

ನಿಂದಂತು ನೀತಿ ನಿಪುಣಾ
ಯದಿ ವಾ ಸ್ತುವಂತು



## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಹಿರಿಯರು ಯಾರು?

ದ್ವಾಪರಯುಗದಲ್ಲಿ ತನ್ನ ವಿಲಾಸಕ್ಕೂ, ವೈಭವಕ್ಕೂ ಪ್ರಖ್ಯಾತವಾದ ಹಸ್ತಿನಾವತಿಯ ರಾಜಸಭೆ. ಸಿಂಹಪೀಠದ ಮೇಲೆ ಅಂಧನರೇಂದ್ರ, ಆತನ ಬಲಗಡೆ ಮದಾಂಧ ಸುಯೋಧನ; ಎದುರಿಗೆ ಅಂಗರಾಜ ಕರ್ಣ ಶಕುನಿ, ದುಶ್ಶಾಸನ, ಈ ಕಡೆ ಕುರುವೃದ್ಧ ಗಾಂಗೇಯ. ಧರ್ಮಮೂರ್ತಿ ವಿದುರ, ಆ ಕಡೆ ಮೂರ್ತೀಭವಿಸಿದ ಧನುರ್ವೇದದಂತೆ ದ್ರೋಣ, ಅಶ್ವತ್ಥಾಮ, ಕೃಪಾಚಾರ್ಯ– ಅವರ ಹಿಂದಿನ ಸಾಲಿನಲ್ಲಿ ಸಿಂಧುರಾಜ ಜಯದ್ರಥ, ತ್ರಿಗರ್ತಾಧಿಪತಿ ಸುಶರ್ಮ ಮತ್ತು ದುರ್ಯೋಧನನ ಅನುಜಸ್ತೋಮ. ಸಭಾಭವನದಲ್ಲಿನ ಅಮೃತಶಿಲಾವೇದಿಕೆಯ ಮೇಲೆ ಪೂಜಾದ್ರವ್ಯಗಳು, ಮಂಗಳವಸ್ತುಗಳು ಸಿದ್ಧವಾಗಿವೆ. ಇಡೀ ವಾತಾವರಣದಲ್ಲಿ ರಾಜಗಾಂಭೀರ್ಯದೊಂದಿಗೆ, ಕುರುಕುಲೇಶ್ವರನ ಕಲಾಭಿರುಚಿ ಸಮ್ಮಿಳಿತವಾಗಿದ್ದಂತೆ ಕಾಣುತ್ತಿದೆ. ಸಭೆಯ ಬೆಡಗನ್ನೆಲ್ಲ ನೋಡಿದರೆ ಯಾವುದೋ ಸಮಾರಂಭ ನಡೆಯಲಿದೆ. ಅಥವ ಯಾರೋ ಮಹಾನ್ ವ್ಯಕ್ತಿಯ ಆಗಮನಕ್ಕಾಗಿ, ಸನ್ಮಾನಕ್ಕಾಗಿ ವ್ಯವಸ್ಥೆಯಾಗಿರುವಂತೆ ಭಾಸವಾಗುತ್ತಿದೆ. ಮಹೇಂದ್ರನ ವೈಭವವನ್ನೂ ಧಿಕ್ಕರಿಸುವ ಸಿರಿತನ, ಸರಿಸಾಟಿಯಿಲ್ಲದ ಪೌರುಷದಿಂದ, ಸಹಜ ಕವಚಕುಂಡಲಾಲಂಕೃತನೂ, ಆಹವಮಲ್ಲನೂ ಆದ ಭಾಸ್ಕರತನುಜನ ಆಪ್ತಮೈತ್ರಿ, ನಭೂತೋನಭವಿಷ್ಯತಿ ಎಂಬಂತಹ ಮಂತ್ರಾಲೋಚನಾಚತುರನಾದ ಸೌಬಲನ ಸಮಯೋಚಿತ ಪ್ರಜ್ಞಾವೈಭವ ... ಇವು ಸುಯೋಧನನ ಪರಾಕ್ರಮ ಪ್ರವಾಹಕ್ಕೆ ಉಪನದಿಗಳಾಗಿರುವುದರಿಂದ, ಕುರುವಂಶದ ಗೌರವಪ್ರತಿಷ್ಠೆಗಳು ಮತ್ತು ಭವಿಷ್ಯವೇನಾದೀತೋ ಎಂಬ ಚಿಂತೆಯಿಂದ ಹಣ್ಣಾಗಿ ಹೋಗಿದ್ದ ಮಂದಾಕಿನೀನಂದನನ ಉಜ್ವಲ ನಯನಗಳು ವ್ಯಕ್ತಪಡಿಸುತ್ತಿದ್ದ ಭಾವವನ್ನು ಗಮನಿಸಿದಾಗ, ಸಭೆ ಯಾರ ಶುಭಾಗಮನವನ್ನೆದುರುನೋಡುತ್ತಿತ್ತೋ ಆ ವ್ಯಕ್ತಿಯ ಮಹತ್ವ ಸುಸ್ಪಷ್ಟವಾಗುವಂತಿತ್ತು.

ಕುರುಕುಲೇಶ್ವರನ ಸಭೆಗೆ ಆಗಮಿಸಿದವರು ದೇವರ್ಷಿ ನಾರದರು. ವೀಣಾವಿನೋದ ರಸಿಕರೂ, ನಿರಂತರ ಹರಿಸ್ಮರಣಾನಂದಾಂದೋಳಿತಾಂತಃಕರಣರೂ ಆದ ಬ್ರಹ್ಮಮಾನಸಪುತ್ರನನ್ನು ಸುಯೋಧನ ಪರಮಗೌರವದಿಂದ ಸ್ವಾಗತಿಸಿದ, ಗೌರವಿಸಿದ, ಪೂಜಿಸಿದ. ಮಾನ್ಯರಾಗಮನದಿಂದ ಪೂಜ್ಯರ ಪಾದಧೂಳಿಯಿಂದ ಸಭೆ ಧನ್ಯವಾಯ್ತೆಂದು, ಕೃತಜ್ಞತೆಯಿಂದ ಬಿನ್ನವಿಸಿದ. ನಾರದರು ನಸುನಗುತ್ತ ಕುರುಸಾರ್ವಭೌಮನ ಗೌರವವನ್ನು ಸ್ವೀಕರಿಸಿದರು. ವಿಶೇಷಾಲಂಕೃತವಾದ ಭದ್ರಾಸನದ ಮೇಲೆ ಕುಳಿತಿದ್ದ ದೇವರ್ಷಿಯನ್ನು ಕುರಿತು– "ದೇಶ ದೇಶಾಂತರಗಳಲ್ಲಿ ಸಂಚರಿಸುವ ಮಹರ್ಷಿಗಳು ಏನಾದರೂ ಹೊಸದಾದ, ವಿಚಿತ್ರವಾದ, ಬೋಧಪ್ರದವಾದ ಸಮಾಚಾರವನ್ನು ತಂದಿರಬಹುದೆಂದು ನಾನು ಭಾವಿಸುತ್ತೇನೆ"— ಎಂದರು ಗಾಂಗೇಯರು.

"ಸರ್ವಜ್ಞರಾದ ಪಿತಾಮಹರಿಗೆ ಹೊಸದಾದ, ವಿಚಿತ್ರವಾದ, ಬೋಧಪ್ರದವಾದ ಸುದ್ದಿ ಯಾವುದು ತಾನೆ ಇದ್ದೀತು ?" ನಾರದರು ನಗುತ್ತ ನುಡಿದರು.

"ಆದರೇನಂತೆ – ದೇವರ್ಷಿಗಳಾಗಮನವೆಂದರೆ ಅದರೊಡನೆ ಏನಾದರೂ ಸುದ್ದಿ ಇರಲೇಬೇಕಲ್ಲವೆ ?" ಶಕುನಿ ಸಹಜ ವ್ಯಂಗ್ಯದ ಧ್ವನಿಯಲ್ಲಿ ಹೇಳಿದ.

"ಹಾಗೇನಿಲ್ಲ ಸೌಬಲ. ಕೆಲವು ದಿನಗಳ ಹಿಂದೆ ಗಂಗಾನದೀ ತೀರದಲ್ಲಿ ಅರುಣೋದಯದ ವೇಳೆಯಲ್ಲಿ ಸಂಚರಿಸುತ್ತಿದ್ದೆ. ಅಲ್ಲೊಂದು ಬೃಹದಾಕಾರದ ಆಮೆಯನ್ನು ಕಂಡೆ. ಅದು ಸುಮಾರು ಒಂದು ಪರ್ವತದಷ್ಟಿತ್ತು. ಅಂತಹ ಪ್ರಾಣಿಯನ್ನು ನಾನೆಂದೂ ಕಂಡಿರಲಿಲ್ಲ. ನಿಶ್ಚಿಂತೆಯಿಂದ ಈ ನದಿಯಲ್ಲಿ ವಿಹರಿಸುವ ನೀನೆಷ್ಟು ಧನ್ಯಜೀವಿ—ಎಂದು ನಾನು ಹೇಳಿದಾಗ ಆಮೆ ತನ್ನ ಧ್ವನಿಯಲ್ಲಿ ನಗುತ್ತ— "ನನ್ನನ್ನು ಕಂಡು ತಾವು ಆಶ್ಚರ್ಯಪಡುವ ಕೆಲಸವೇನಿದೆ ನಾರದರೇ? ನನ್ನಂತಹ ಲಕ್ಷ ಲಕ್ಷ ಚಿತ್ರವಿಚಿತ್ರ ಜೀವಿಗಳಿಗೆ ಆಶ್ರಯ ಕೊಟ್ಟಿರುವ ಈ ಗಂಗಾನದಿ ನಿಜಕ್ಕೂ ಆಶ್ಚರ್ಯವಲ್ಲವೆ" ಎಂದಿತು. ಅದರ ಮಾತು ನಿಜವೂ ಸಹ. ಅಲ್ಲವೇ ಅಂಗರಾಜ? – ನಾರದರು ಕೇಳಿದರು.

"ತಾವೇನು ಹೇಳಿದಿರಿ?" — ಕರ್ಣ ಸಂಕ್ಷೇಪವಾಗಿ ಪ್ರಶ್ನಿಸಿದ.

"ನಾನು ಈ ವಿಷಯದಲ್ಲಿ ಗಂಗೆಯನ್ನೇ ಕೇಳಿದೆ. ಸಾಗರಗಾಮಿನಿಯಾಗಿರುವುದು, ತರಂಗ ಮಂಗಳೆಯಾಗಿ–ಪಾಪನಾಶಿನಿ ಎಂಬ ಬಿರುದು ಪಡೆದಿರುವುದು, ಕೋಟಿಕೋಟಿ ಜನಕ್ಕೆ ಅನ್ನದಾಯಿನಿಯಾಗಿ ಪ್ರಖ್ಯಾತವಾಗಿರುವುದು... ಇದೆಲ್ಲ ನೋಡಿದರೆ, ಭಾಗೀರಥಿ– ನೀನೆಷ್ಟು ಧನ್ಯೆ – ಎಂದು ನಾನು ಜಹ್ನುಸುತೆಯನ್ನು ಕೊಂಡಾಡಿದೆ."

"ನನ್ನ ತಾಯಿ ಏನು ಹೇಳಿದಳೋ" – ಗಾಂಗೇಯರು ಕುತೂಹಲದಿಂದ ಕೇಳಿದರು.

"ಸಹಜ ವಿನಯ ಸಂಪನ್ನೆಯಾದ ಆಕೆ ನನ್ನ ಮಾತನ್ನು ಒಪ್ಪಲಿಲ್ಲ. ಈ ಪ್ರಶಂಸೆಗೆ ಪಾತ್ರಳಲ್ಲವೆಂದು ಗಂಭೀರವಾಗಿ ಹೇಳಿದಳು. ಲೋಕದಲ್ಲಿ ನನ್ನಂತಹ ಸಹಸ್ರಸಹಸ್ರನದಿಗಳನ್ನು ತನ್ನಲ್ಲಡಗಿಸಿಕೊಳ್ಳುವ ಸಾಮರ್ಥ್ಯ ಸಾಗರಕ್ಕಿದೆ. ರತ್ನಾಕರನೆಂಬ ಹೆಸರಿಗೆ ಪಾತ್ರನಾದ ಆತ, ಗಾಂಭೀರ್ಯಕ್ಕೆ ಹೆಸರಾಂತವನಲ್ಲವೇ ದೇವರ್ಷಿ. ಆತನ ಮುಂದೆ ನಾನೆಷ್ಟರವಳು. — ಎಂದಳು.

"ದಿವಿಜನದಿಯ ಮಾತಿನಿಂದ ನಿಮ್ಮ

**ವಿದ್ವಾನ್ ಬ. ನ. ಗುಂಡೂರಾವ್**

ಕುತೂಹಲ ಮತ್ತಷ್ಟು ಕೆರಳಿರಬೇಕಲ್ಲವೇ? —ವಿನಯಮೂರ್ತಿ ವಿದುರ ಕೇಳಿದ.

"ನಿಜ ವಿದುರ, ನಾನು ಸರಿತ್ಪತಿಯನ್ನೇ ಕೇಳಿದಾಗ ಆತ ಏನು ಹೇಳಿದ ಗೊತ್ತೆ?"

"ಹೌದು - ನಿಮ್ಮ ಮಾತು ನಿಜ - ಎಂದಿರುತ್ತಾನೆ'—ದುಶ್ಶಾಸನ ಹೇಳಿದ.

"ಹಾಗೆಲ್ಲ ಅವಿವೇಕವಾಗಿ ಮಾತಾಡು ವಷ್ಟು ಮೂರ್ಖನಲ್ಲ ಸರಿತ್ಪತಿ-" ಅಶ್ವತ್ಥಾಮ ಬಿಗುಮಾನದಿಂದ ನುಡಿದ.

"ಧಾರ್ತರಾಷ್ಟ್ರರ ಮಾತೆಂದರೆ ಅಶ್ವತ್ಥಾಮ ಸದಾವಿರೋಧ ಮಾಡುತ್ತಾನೆ. ಅವರು ಮಾತಾಡುವುದೂ ಸಹ ಅದೇ ಧಾಟಿಯಲ್ಲಿ. ಅದವರ ಸ್ವಭಾವ. ಆ ಮಾತು ಹಾಗಿರಲಿ - ಆಮೇಲೇನಾಯ್ತು? ದ್ರೋಣರು ನಗುತ್ತ ನುಡಿದರು.

"ಚೆನ್ನಾಗಿ ಹೇಳಿದಿರಿ ಆಚಾರ್ಯರು – ನನಗಂತೂ ಯಾರು ದೊಡ್ಡವರು - ಯಾರು ಧನ್ಯರು ಎಂಬ ಪ್ರಶ್ನೆ ಬಗೆ ಹರಿಯಲಿಲ್ಲ. ರತ್ನಾಕರನನ್ನೇ ಕೇಳಬೇಕೆಂದು ಹೊರಟೆ. ಆತ ಗಂಭೀರನೂ ಉದಾತ್ತ ಸ್ವಭಾವದವನೂ ಆದ್ದರಿಂದ, ದುಶ್ಶಾಸನ ಊಹೆ ಮಾಡಿದಂತೆ ಮಾತಾಡಲಿಲ್ಲ. "ಭಗವತಿ ವಸುಂಧರೆ, ನನ್ನಂತಹ ಸಮುದ್ರಗಳಿಗೂ ಆಧಾರವಾಗಿ, ಹಿಮಾಚಲ, ವಿಂಧ್ಯಾಚಲ ಮುಂತಾದ ನಗಶ್ರೇಷ್ಠಗಳನ್ನು ಧರಿಸಿ - ಕೋಟಿಕೋಟಿ ಜನರೇ ಅಲ್ಲದೆ ಸ್ಥಾವರ ಜಂಗಮಾತ್ಮಕವಾದ ಸೃಷ್ಟಿಯನ್ನೆಲ್ಲ ಹೊತ್ತಿರುವ – ಎಲ್ಲರಿಗೂ ಅನ್ನದಾಯಿನಿಯಾಗಿರುವ ಮಹಾತಾಯಿ. ಆಕೆ ಕ್ಷಮಾಮೂರ್ತಿ. ಆಕೆಯ ಮುಂದೆ ನನ್ನ ಯೋಗ್ಯತೆ ಎಳ್ಳಷ್ಟು ಇಲ್ಲ. ಎಂದು ನುಡಿದ ಸಾಗರನ ಮಾತು ನನ್ನನ್ನು ಇನ್ನಷ್ಟು ಚಕಿತಗೊಳಿಸಿತು.

"ದೇವರ್ಷಿ, ತಾವು ಭಗವತಿ ವಸುಮತಿಯನ್ನೇ ಕೇಳಬೇಕಾಗಿತ್ತು" - ಹುಡುಗನಾದ ಜಯದ್ರಥ ಹೇಳಿದ.

"ಹೌದು ನಾನಾಕೆಯನ್ನು ಕೇಳಿದೆ. ಆಕೆ ಎಷ್ಟಾದರೂ ಪರಮ ಸಾಧ್ವಿಯಲ್ಲವೆ. ಸಿಂಧುರಾಜ? ಖಗೋಳಕ್ಕೆ ಹೋಲಿಸಿದಾಗ ನಾನೆಷ್ಟರವಳು - ಅಲ್ಲಿರುವ ರುದ್ರಭೀಕರ ಬೃಹದಾಕೃತಿಗಳ ಮುಂದೆ ನಾನು ಅಣು ಮಾತ್ರ ಅಷ್ಟೆ. ಅದೂ ಅಲ್ಲದೆ ಎಲ್ಲರಂತೆ ನಾನೂ ಸೃಷ್ಟಿಸಲ್ಪಟ್ಟ ವಸ್ತುವೇ ವಿನಃ, ಸೃಷ್ಟಿಸಿದಾತ ಬೇರೆ ಇದ್ದಾನಲ್ಲವೇ. ಬ್ರಹ್ಮದೇವನ ಸೃಷ್ಟಿ ಚಮತ್ಕಾರದ ಹಿಂದು ಕಿರುವಸ್ತು ಮಾತ್ರ ನಾನು - ಎಂದಳು. ಆಕೆಯ ಗಾಂಭೀರ್ಯ ಪ್ರಶಂಸನೀಯ.'' ನಾರದರು ನಗುತ್ತ ಹೇಳಿದರು.

"ನೀವು ಬ್ರಹ್ಮ ಮಾನಸ ಪುತ್ರರಲ್ಲವೆ? ಕಮಲಾಸನನ್ನೇ ಕೇಳಬಹುದಾಗಿತ್ತು"— ಧೃತರಾಷ್ಟ್ರ ಹೇಳಿದ.

"ಕುರುಸಾರ್ವಭೌಮ; ಆತನನ್ನು ಈ ಬಗ್ಗೆ ನಾನು ಕೇಳಿದೆ. ಸಕಲ ವಿದ್ಯಾಧಿದೇವತೆಯಾದ ವಾಗ್ದೇವಿಯ ಸಮಕ್ಷಮದಲ್ಲೇ ಕೇಳಿದೆ. ಆ ತಾಯಿ ಬಾಲಕನಾದ ನನ್ನ ಪ್ರಶ್ನೆಯನ್ನು ಕೇಳಿ ನಸುನಗೆ ಬೀರಿದ್ದೇ ಅಲ್ಲದೆ, ಸತ್ಯಲೋಕಾಧೀಶ ನೇನುತ್ತರ ಹೇಳುವರೋ - ಎಂದು ತುಂಬ ಕುತೂಹಲದಿಂದ ಕುಳಿತಿದ್ದಳು. ಯಾರು ದೊಡ್ಡವರು - ಎಂಬ ಪ್ರಶ್ನೆ ಬಂದಾಗ ಬಹುಶಃ ನಾನಲ್ಲವೆನ್ನುವರು ದೊಡ್ಡವರಾಗಿರುತ್ತಾರೆಂದು ಹಿರಿಯರು ಹೇಳುತ್ತಾರೆ. ನನಗಿಂತಲೂ ಯಜ್ಞಗಳು ದೊಡ್ಡವು. ವೇದಗಳು ಮಹತ್ವಪೂರ್ಣವಾದುವು - ಎಂದ ಕಮಲಸಂಭವ. ನಾನು ವೇದಗಳನ್ನೂ ಕೇಳಿದೆ. 'ಶ್ರುತಿಸ್ಮೃತಿರ್ಮಮೈವಾಜ್ಞಾ' ಎಂದು ಸಿದ್ಧಾಂತವೇ ಇರುವಾಗ ಆ ಬ್ರಹ್ಮವಸ್ತುವೇ - ಶ್ರೀಹರಿಯೇ- ದೊಡ್ಡವನಲ್ಲವೇ ಎಂದು ವೇದಗಳು ಸೂಚಿಸಿದುವು. ನಿಜವೇ ಇರಬೇಕು. ಏಕೆಂದರೆ ಆತನನ್ನು ವೇದಪುರುಷನೆಂದೇ ದೊಡ್ಡವರು ಕರೆದಿದ್ದಾರಲ್ಲವೇ? - ಎಂದು ನಾನು ಯೋಚಿಸಿದೆ.

ನಾರದರ ಮಾತುಗಳನ್ನು ಕೇಳುತ್ತ ಸುಮ್ಮನೆ ಕುಳಿತಿದ್ದ ದುರ್ಯೋಧನ – ಮೀಸೆ ಹುರಿಮಾಡುತ್ತ ಹೇಳಿದ —

"ನಾರದರಿಗೆ ದೊಡ್ಡವರಾರು ಎಂಬ ಪ್ರಶ್ನೆ ಹುಟ್ಟಿದ್ದೇ ಅನುಚಿತವೆಂದು ನನ್ನ ಅಭಿಪ್ರಾಯ. ಈ ಕೆಲಸಕ್ಕೆ ಬಾರದ ವಿಷಯದಲ್ಲಿ ತಾವೇಕೆ ಇಷ್ಟು ತಲೆಕೆಡಿಸಿಕೊಂಡಿರಿ — ಎಂದು ನನಗೆ ಆಶ್ಚರ್ಯವಾಗುತ್ತಿದೆ."

ಛಲದಂಕಮಲ್ಲನ ಮಾತು ಕೇಳಿ ಇಡೀ ಸಭೆ ಬೆಕ್ಕಸಬೆರಗಾಯ್ತು. ನಾರದರು ಮಾತ್ರ ಬೆರಗಾಗಲಿಲ್ಲ. ಅವರ ನಯನಗಳಲ್ಲಿ ಆದೇನೋ ವಿನೂತನ ದೀಪ್ತಿ ಗೋಚರವಾಯ್ತು. ಮುಖದ ಮೇಲೆ ಅಲೌಕಿಕವಾದ ತೇಜಸ್ಸು ಲಹರಿ ಲಹರಿಯಾಗುರುಳುತ್ತಿರುವಂತೆ ಭಾಸವಾಯ್ತು. ಹೆಗಲ ಮೇಲಿದ್ದ - ಮಹತಿಯನ್ನು ತೆಗೆದಿಟ್ಟು – ಸಿಂಹಪೀಠದ ಮೇಲಿದ್ದ ಸುಯೋಧನನನ್ನುದ್ದೇಶಿಸಿ ಹೇಳಿದರು—"ಕುರುನರೇಂದ್ರ, ದೊಡ್ಡವರಾರೆಂಬ ಪ್ರಸ್ತಾಪವನ್ನು ಈ ಮೆರೆವ ಸಭಾಭವನದಲ್ಲಿ ತೆಗೆದದ್ದು ನಿನಗೆ ತುಂಬ ಅಸಮಾಧಾನವಾಗಿರಬಹುದೆಂದು ನಾನು ಭಾವಿಸುತ್ತೇನೆ. ಇದು ಅಧಿಕಾರ ಪ್ರಮತ್ತರಾದವರ ಸ್ವಭಾವವೆಂದು ನನಗೆ ತಿಳಿದಿದೆ. ಯಮಸುತನಿಷ್ಕಾರಣದ್ವೇಷಿಯಾದ ನೀನು ಒಂದು ವಿಷಯದಲ್ಲಿ ತುಂಬ ಹೆಮ್ಮೆ ಪಟ್ಟುಕೊಳ್ಳಬೇಕು. ಲೋಕೋತ್ತರ ಧೀಮಂತ ವ್ಯಕ್ತಿಗಳಿಂದ ರಾರಾಜಿಸುವ ಈ ನಿನ್ನ ಸಭಾಭವನ ಇನ್ನು ಕೆಲವೇ ದಿನಗಳಲ್ಲಿ ವೇದಪುರುಷನ ಪಾದಧೂಳಿಯಿಂದ ಪುನೀತವಾಗಲಿದೆ. ಪಾಂಡವರು ಅದ್ದೂರಿಯಾಗಿ ನಡೆಸಿದ ರಾಜಸೂಯಾಧ್ವರದಲ್ಲಿ ಯಾರಿಗೆ ಅಗ್ರಪೂಜೆ ಸಲ್ಲಿಸಿದಾಗ ನಿನ್ನ ಮಿತ್ರನಾದ ಶಿಶುಪಾಲ – ಅದನ್ನು ತೀವ್ರವಾಗಿ ವಿರೋಧಿಸಿದನೋ – ತತ್ಫಲವಾಗಿ ಯಾರ ಚಕ್ರಾಯುಧಕ್ಕೆ ತನ್ನ ತಲೆಯನ್ನೇ ಬಲಿಯಾಗಿತೆತ್ತನೋ ಅಂತಹ ಭುವನೈಕಪೂಜ್ಯನಾದ ಕೃಷ್ಣ – ಇನ್ನು ಕೆಲವೇ ದಿನಗಳಲ್ಲಿ ನಿನ್ನ ಸಭೆಗೆ ಆಗಮಿಸಲಿದ್ದಾನೆ. ಆತನಾಗಮನ ಮಹತ್ವಪೂರ್ಣ ಉದ್ದೇಶದಿಂದ ಕೂಡಿರುತ್ತದೆ. ಆತನ ನಿರ್ಗಮನವೂ ಅಷ್ಟೇ ಗಮನಾರ್ಹವಾಗಿರುತ್ತದೆ. ಸುಯೋಧನ ಸಾರ್ವಭೌಮ, ಆತನ ಸಲಹೆಯಂತೆ ವರ್ತಿಸು–ಸುಕ್ಷೇಮಿಯಾಗಿ ಬಾಳು. ದೊಡ್ಡವರನ್ನು ಗೌರವಿಸುವುದೆಂದರೆ ಅದು ಸಂಸ್ಕೃತಿ ಸೂಚಕವೆಂದು ನೀನಿನ್ನೂ ಅರಿಯಬೇಕಾಗಿದೆ''.

"ಕುಮಾರ–ದೊಡ್ಡವರಾರೆಂಬ ಪ್ರಶ್ನೆಗೆ ನಾರದರೇನುತ್ತರ ಪಡೆದರೆಂಬ ವಿಷಯ ಇನ್ನೂ ಸ್ಪಷ್ಟವಾಗಲಿಲ್ಲ. ಅಷ್ಟರಲ್ಲಿ ನೀನು ಮಾತಾಡಿದ್ದು ಸಾಕಷ್ಟು ಗಂಭೀರವಾಗಿಲ್ಲವೆಂದು ಹೇಳಲು ನಾನು ತುಂಬ ವಿಷಾದಿಸುತ್ತೇನೆ." – ಗಾಂಗೇಯರು ಆಕ್ಷೇಪಣೆ ಮಾಡಿದರು.

"ಪಿತಾಮಹರೆ – ಕುರುಸಾರ್ವಭೌಮನ ಅಭಿಪ್ರಾಯವನ್ನು ತುಂಬುಸಭೆಯಲ್ಲಿ ವಿರೋಧಿಸುವ ಅವಿವೇಕಕ್ಕೆ ತಾವು ಕೈಹಾಕುತ್ತೀರೆಂದು ನಾನು ಭಾವಿಸಿರಲಿಲ್ಲ."

ಸಾರ್ವಭೌಮನ ಮಾತು ಸಾಕಷ್ಟು ಬಿಸಿಯಾಗಿತ್ತು. ಸಂದರ್ಭವನ್ನು ಗಮನಿಸಿದ ನಾರದರು ತಮ್ಮ ಮಾತನ್ನು ಮುಂದುವರಿಸುತ್ತ – "ಯಾರನ್ನು ವೇದಪುರುಷನೆಂದು ಹಿರಿಯರು ಕೊಂಡಾಡಿರುವರೋ – ಯಾರನ್ನು ವೇದ ಪ್ರತಿಪಾದ್ಯನೆಂದು ದೊಡ್ಡವರು ನಿರ್ಣಯಿಸಿರುವರೋ – ಆತನನ್ನೇ ಕೇಳಬೇಕೆಂದು ನನ್ನ ಮನಸ್ಸು ಬಯಸಿತು. ಆದರೆ ಮರುಕ್ಷಣದಲ್ಲೇ ನನಗೊಂದು ಆಲೋಚನೆ ಹೊಳೆಯಿತು. ಯಾರನ್ನು ಕೇಳಿದರೂ ನಾನು ದೊಡ್ಡವನಲ್ಲವೆನ್ನುತ್ತಾರೆ. ಹಾಗಾದರೆ ನಾನೇ ದೊಡ್ಡವನು ಎಂದುಕೊಳ್ಳುವ ವ್ಯಕ್ತಿ ಜಗತ್ತಿನಲ್ಲೇ ಇಲ್ಲವೇನು? ಇಲ್ಲದೇ ಏನು? ಹುಡುಕಬೇಕು ಅಷ್ಟೆ – ಎಂದು ಈ ಸಭೆಗೆ ಬಂದೆ – ಕಂಡೆ'' – ಎಂದರು.

ನಾರದರ ಮಾತು ಕೇಳಿ ಸಭೆಯ ಹಿರಿಯರು ಗೊಳ್ಳೆಂದು ನಕ್ಕರು–ಕೆಲವರು ಕಣ್ಣು ಕೆಂಪಗೆ ಮಾಡಿಕೊಂಡರು. ಕೆಲವರು ಅಸಮಾಧಾನದಿಂದ ಬುಸುಗುಟ್ಟಿದರು.

"ನಿಮ್ಮನ್ನು ಕಲಹಪ್ರಿಯ – ಎಂದದ್ದು ಸಾರ್ಥಕವಾಯ್ತು'' ಶಕುನಿ ಹೇಳಿದ.

"ಶಕುನಿ, ಈ ಬಿರುದು ನನಗಿಂತಲೂ ನಿನಗೆ ಹೆಚ್ಚು ಶೋಭಾಯಮಾನವಾಗಿರುವಂತೆ ಕಾಣುತ್ತದೆ. ಆ ಮಾತು ಹಾಗಿರಲಿ. ಎಲ್ಲರಿಗಿಂತ ಎಲ್ಲ ವಸ್ತುಗಳಿಗಿಂತ ದೊಡ್ಡವನಾದ, ಶ್ರೇಷ್ಠನಾದ, ಭುವನವಂದ್ಯ ಪಾದಾರವಿಂದನಾದ ಶ್ರೀಕೃಷ್ಣ ಸಂಧಿ ಪ್ರಸ್ತಾಪಕ್ಕೆ ಬಂದಾಗ – ದುರ್ಯೋಧನ ಸಾರ್ವಭೌಮ – ನೀನಾತನ ಮಾತಿಗೆ ಬೆಲೆ ಕೊಟ್ಟು ಶ್ರೇಯಸ್ಸು ಪಡೆಯುವಂತಾದರೆ– ನನಗದೇ ಸಂತೋಷ. ಪ್ರಪನ್ನಪಾರಿಜಾತನಾದ ಕೃಷ್ಣನನ್ನು ಸಾಮಾನ್ಯನೆಂದು ತಿಳಿಯಬೇಡ. ಆತನ ಮಾತನ್ನು ಲಘುವಾಗೆಣಿಸಬೇಡ. ಪೂರ್ವಭಾವಿಯಾಗಿ ವಿಷಯ ತಿಳಿಸಲು ಬಂದೆ. ಶ್ರೇಯೋಸ್ತು" ಎನ್ನುತ್ತ ನಾರದರು ಮಹತಿ ಮೀಟುತ್ತ ಹೊರಟರು.



(16 ನೆ ಪುಟದಿಂದ)

ಇದ್ದೇ ಇರುತ್ತವೆ. ಶ್ರೀಕೃಷ್ಣನು ಇಂದ್ರಿಯ ಜೀವನದ ಒಳಗುಟ್ಟನ್ನು ಚೆನ್ನಾಗಿ ಬಲ್ಲವನಾಗಿದ್ದ ಆದುದರಿಂದಲೇ ಸಂಸ್ಕೃತ ಸಾಹಿತ್ಯಕಾರರು "ನದೇವ ಚರಿತಂ ಚರೇತ್" ಎಂದು ಹೇಳಿದ್ದಾರೆ. ಅಂದರೆ ದೇವತಾ ಪುರುಷನು ನಡೆದ ನಡವಳಿಕೆಯನ್ನು ಇತರ ಸಾಮಾನ್ಯರು ಅನುಸರಿಸುವುದು ವಿಹಿತವಲ್ಲ ಎಂದು ಇದರ ಅರ್ಥವಾಗುತ್ತದೆ.

ಗೀತಾಚಾರ್ಯನೆಂದು ಕರೆಸಿಕೊಳ್ಳುವ ಶ್ರೀಕೃಷ್ಣನು ಹುಟ್ಟಿದ ಜನ್ಮಸ್ಥಳದಲ್ಲಿ ಈ ಶತಮಾನದಲ್ಲಿಯೇ ಮಸೀದಿಯೊಂದನ್ನು ಕಟ್ಟುವ ಪ್ರಯತ್ನವು ಬಹುಉತ್ಸಾಹದಿಂದ ಪ್ರಾರಂಭವಾಗಿತ್ತು. ಆದರೆ ಹಿಂದುಗಳ ಸುದೈವದಿಂದ ಶ್ರೀಕೃಷ್ಣ ಜನ್ಮ ಭೂಮಿಯ ಪುನರುಥ್ಥಾನ ಕಾರ್ಯವನ್ನು ಮನದಲ್ಲಿಟ್ಟುಕೊಂಡು ರಚಿತವಾಗಿದ್ದ ಸಮಿತಿಯೊಂದಕ್ಕೆ ಅಂದಿನ ಲೋಕಸಭಾಧ್ಯಕ್ಷರಾದ ಹಾಗೂ ಸನಾತನ ಸಂಪ್ರದಾಯವಾದಿಯಾದ ತಿರುಪತಿಯ ನಿವಾಸಿಗಳಾಗಿದ್ದ ದಿವಂಗತ ಅನಂತಶಯನಮ್ ಐಯ್ಯಂಗಾರರು ಅಧ್ಯಕ್ಷರಾಗಿದ್ದರು, ಈ ಕಾಲಾವಧಿಯಲ್ಲಿಯೇ ಕರ್ನಾಟಕ ರಾಜ್ಯದ ಶ್ರೀನಿವಾಸ್ ಎಸ್. ಆರ್. ರಾವ್ ಎಂಬ ಅಧಿಕಾರಿಗಳು ಆಭಾಗದ ಪ್ರಾಚ್ಯವಸ್ತು ಇತಿಹಾಸ ಸಂಶೋಧನಾಲಯದ ವರ್ತುಲಾಧಿಕಾರಿಗಳೆಂದು ನಿಯುಕ್ತರಾಗಿದ್ದರು, ಈ ಮಹಶೀಯರೆಲ್ಲರ ಸಂತತ ಪರಿಶ್ರಮದಿಂದಾಗಿ ಇಂದು ನಾವು ಪುನಃ ಮಹಾನುಭಾವನಾದ ಶ್ರೀಕೃಷ್ಣನ ಜನ್ಮಸ್ಥಳದಲ್ಲಿಯೇ ಸುಂದರವಾದ ದೇವಮಂದಿರವನ್ನು ಕಾಣುವಂತಾಗಿದೆ. ಈ ಮಂದಿರದಲ್ಲಿ ದ್ವಿಭುಜಯುಕ್ತನಾದ ಶ್ರೀಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ, ದೇವಾಲಯದ ಪ್ರಾಕಾರದಲ್ಲಿ ಸುಂದರವಾದ ದೇವನಾಗರಿಯ ಲಿಪಿಯಲ್ಲಿ ಕೆತ್ತಲ್ಪಟ್ಟ ಶ್ರೀಕೃಷ್ಣ ಗೀತೋಪದೇಶದ ಶ್ಲೋಕಗಳನ್ನು ಓದಿ ಪುನೀತರಾಗುವಂತಾಗಿದೆ.

ಯಮುನಾ ನದಿಯ ಪ್ರವಾಹದ ಒಂದು ದಂಡೆಯ ಮೇಲೆ ಈ ಮಥುರಾ ನಗರವಿದ್ದರೆ ಇನ್ನೊಂದು ದಂಡೆಯ ಮೇಲೆ ವೃಂದಾವನವಿದೆ. ಚಳಿಗಾಲದಲ್ಲಿ ಬೇರೆ ಬೇರೆ ಭಾಗಗಳಿಂದ ದಕ್ಷಿಣದಲ್ಲಿರುವ ಪಂಢರಪುರದ ಪಾಂಡುರಂಗನ ಭಕ್ತರಂತೆ ಇಲ್ಲಿಯೂ ಸಹ ಭಕ್ತರು ಗುಂಪು ಗುಂಪಾಗಿ ಆಗಮಿಸುತ್ತಾರೆ, ಭಕ್ತಿಭಾವದಿಂದ ಆ ದೇವನ ಲೀಲಾವಿನೋದಗಳನ್ನು ಹಾಡಿ ಕುಣಿದು ನರ್ತಿಸುತ್ತಾರೆ. ಈ ಮಹಾನಗರವು ಒಂದು ಕಾಲದಲ್ಲಿ ಭಾರತೀಯ ಕ್ರಾಂತಿಕಾರರಿಗೆಲ್ಲಾ ಆಶ್ರಯದ ನೆಲೆ, ಸ್ಥಾನವಾಗಿತ್ತೆಂದು ಹೇಳಿದಲ್ಲಿ ಎಂಥವರಿಗೂ ಆಶ್ಚರಿಯಾಗಬಹುದು.

ಬ್ರಜಯಾತ್ರೆಯನ್ನು ಅಥವಾ ಮಥುರಾ ಯಾತ್ರೆಯನ್ನು ವಿಶೇಷವಾಗಿ ವರ್ಷಾಋತುವಿನಲ್ಲಿ ಕೈಕೊಳ್ಳುವುದು ಅತ್ಯಂತ ಶ್ರೇಷ್ಠವಾದುದೆಂಬ ಭಾವನೆಯಿದೆ. ವಿಶೇಷವಾಗಿ ಇಲ್ಲಿ ವರ್ಷದಲ್ಲಿ ಮೂರುಸಲ ಉತ್ಸವಗಳು ನಡೆಯುತ್ತವೆ ಮೊದಲನೆಯ ಉತ್ಸವವು ಮಥುರಾನಗರದ ಚತುರ್ವೇದಿಯವರಿಂದ ಆರಂಭವಾಗುತ್ತದೆ. ಇದು ಭಾದ್ರಪದ ಕೃಷ್ಣ ಏಕಾದಶಿಯಿಂದ ಹದಿನಾರು ದಿನಗಳ ಕಾಲ ನಡೆಯುವುದುಂಟು, ಮೂರನೆಯ ಉತ್ಸವವು ವಲ್ಲಭಾಚಾರ್ಯರ ವಂಶಜರಾದ ಗೋಸ್ವಾಮಿ ಪಂಥದವರಿಂದ ನಡೆಸಲ್ಪಡುತ್ತದೆ, ಇದು ಭಾದ್ರಪದ ಶುಕ್ಲ ಏಕಾದಶಿಯ ದಿನದಂದು ಪ್ರಾರಂಭವಾಗಿ ಒಂದೂವರೆ ತಿಂಗಳು ನಡೆಯುವುದುಂಟು. ಕೆಲವು ಸಂದರ್ಭಗಳಲ್ಲಿ ಇದನ್ನು ಮತ್ತಷ್ಟು ಅವಧಿಯವರೆಗೆ ಮುಂದುವರಿಸುವ ಸಂಪ್ರದಾಯವಿದೆ.

ಫಾಲ್ಗುಣಮಾಸದ ಶಿಶಿರಋತುವಿನಲ್ಲಿಯೂ ಸಹ ಒಂದು ಉತ್ಸವವು ನಡೆಯುತ್ತಿತ್ತು. ಈ ಉತ್ಸವದಲ್ಲಿ ಕೇವಲ ಸಾಧು ಸಂತರು ವಿರಕ್ತರು ಭಾಗವಹಿಸುವ ಪದ್ಧತಿಯಿತ್ತು. ಆದರ ಇತ್ತೀಚೆಗೆ ಈ ಉತ್ಸವ ಕಾಲದಲ್ಲಿ ಎಲ್ಲ ಜನರೂ ಮಿಳಿತರಾಗುವ ಪದ್ಧತಿಯು ನಡೆದು ಬಂದಿದೆ.

ಶ್ರೀಕೃಷ್ಣನನ್ನು ಭಾರತೀಯರು ಸಾವಿರಾರು ವರ್ಷಗಳಿಂದ ತಮ್ಮ ಆರಾಧ್ಯ ದೈವನೆಂದು ನಂಬಿಕೊಂಡು ಬಂದಿದ್ದಾರೆ, ಆದುದರಿಂದ ಕನ್ನಡ ನಾಡಿನ ಭಾವುಕರಿಗೂ ಸಹ ಮಥುರಾ ಕ್ಷೇತ್ರವು ಎಂದಿಗೂ ದೂರಾಗಿ ತೋರುವುದಿಲ್ಲ, ಯಾಕೆಂದರೆ ಯಮುನಾ ವಿಹಾರಿಯಾದ ಶ್ರೀಕೃಷ್ಣನನ್ನು ನಮ್ಮ ಆಚಾರ್ಯ ಮಧ್ವರು ಆತನ ಬಾಲರೂಪವನ್ನು ತಮ್ಮ ಭಕ್ತಿ ಪಾಶದಿಂದ ಬಂಧಿಸಿ "ಕರೆದಲ್ಲಿಗೆ ಬರುವ" ಎಂದು ಹಾಡಿದಂತೆ ತಾವಿರುವ ಸ್ಥಳದವರೆಗೆ ಆ ದೇವನನು ಬರುವಂತೆ ಮಾಡಿ ಕನ್ನಡ ನಾಡಿನ ಸಂತಾನರಿಗೆಲ್ಲಾ ಆ ಪುರಾಣ ಪುರುಷನ ನಿತ್ಯದರ್ಶನವಾಗುವಂತೆ ಅನುಗ್ರಹ ಮಾಡಿದ್ದಾರೆ. ಆದುದರಿಂದಲೇ ದಕ್ಷಿಣ ಕನ್ನಡಲ್ಲಿರುವ ರಜತ ಪೀಠ ಉಡುಪಿ ಶ್ರೀಕೃಷ್ಣ ಭಕ್ತರಿಗೆ ಮಥುರಾ ನಗರವಾಗಿ ಕಾಣುವುದರಲ್ಲಿ ಸಂದೇಹವಿಲ್ಲ. ★

# ಜ್ಯೋತಿರ್ಲಿಂಗಗಳು

ಪರಮಾತ್ಮನು ಸರ್ವವ್ಯಾಪಿಯಾಗಿದ್ದರೂ ಆತನು ಪ್ರಕಟವಾಗುವ ಸ್ಥಳಗಳೆಂದರೆ ತೀರ್ಥಕ್ಷೇತ್ರಗಳು, ತೀರ್ಥಗಳೆಂದರೆ ಪವಿತ್ರ ನದಿಗಳು, ಉಗಮ ಹೊಂದಿದ ಪುನೀತವಾದ ಸರೋವರದ ತೀರಗಳು. ಕ್ಷೇತ್ರಗಳೆಂದರೆ ಯಾತ್ರಾಸ್ಥಳಗಳು ಅಥವಾ ಪುಣ್ಯಸ್ಥಳಗಳು. ಶಿವ ಪುರಾಣದಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳನ್ನು ವರ್ಣಿಸಿದ್ದಾರೆ.

ಭಗವಾನ್ ಶಂಕರನು ಜ್ಯೋತಿರ್ಲಿಂಗದ ರೂಪದಿಂದ ಆವಿರ್ಭವಿಸಿ ಭಕ್ತರನ್ನು ಉದ್ಧರಿಸಿದನು. ಅದರ ವಿವರ ಸ್ತೋತ್ರಗಳ ಪಠಣೆಯಿಂದಲೇ ಸಪ್ತ ಜನ್ಮಗಳ ಪಾಪವು ನಶಿಸುವವು.

ಜ್ಯೋತಿರ್ಲಿಂಗಗಳನ್ನು ಕುರಿತು ಅನೇಕ ಕಥೆಗಳೂ, ಹಾಗೂ ಪವಾಡಗಳು ಪ್ರಚಲಿತವಿದೆ. ಜ್ಯೋತಿರ್ಲಿಂಗಗಳ ಯಾತ್ರೆಯು ತುಂಬಾ ಕಠಿಣಕರವಾಗಿದೆ. ವರ್ಷದ ಹಲವು ಕಾಲಗಳಲ್ಲಿ ಮಾತ್ರ ಈ ಯಾತ್ರೆಯು ಸಾಧ್ಯ. ಅದೂ ಕೂಡಾ ಪರಮ ಪ್ರಯಾಸದಿಂದ ಸಾಧಿಸಬಹುದು. ಪ್ರಸ್ತುತ ಹನ್ನೆರಡು ಜ್ಯೋತಿರ್ಲಿಂಗಗಳ ಕುರಿತು ವಿವೇಚಿಸೋಣ.

**ಸೋಮನಾಥ :**

ಗುಜರಾತು ರಾಜ್ಯದಲ್ಲಿದೆ. ಭಾರತದಲ್ಲಿ ಪ್ರಥಮ ಶ್ರೇಣಿಯ ದೇವಾಲಯವೆನಿಸಿ ವಿದೇಶಿಯರನ್ನೂ ಸಹ ಆಕರ್ಶಿಸಿದೆ. ಈ ದೇವಾಲಯವನ್ನು ಘಜನಿ ಮಹಮದನು ೩ ಸಲ ಕೊಳ್ಳೆ ಹೊಡೆದನು. ಅಲ್ಲಿಯ ಸಂಪತ್ತನ್ನು ಸುಲಿದನು. ಭಾರತದ ಸ್ವತಂತ್ರ್ಯಾನಂತರ ಸರದಾರವಲ್ಲಭಭಾಯಿ ಪಟೇಲರ ಮುಂದಾಳುತನದಲ್ಲಿ ಒಂದು ಹೊಸದೇವಾಲಯವನ್ನು ಆಧುನಿಕ ಶಿಲ್ಪದಿಂದ ಕಟ್ಟಲಾಗಿದೆ. ಗುಜರಾತಿನ ರಾಜಧಾನಿ ಅಹಮ್ಮದಾಬಾದ್‌ನಿಂದ ಇಲ್ಲಿಗೆ ಹೋಗಬಹುದು. ಇದು ಪ್ರಸಿದ್ಧ ಪ್ರವಾಸಕ್ಷೇತ್ರ. ಚಂದ್ರನ ದುಃಖ ನಿವಾರಣೆಮಾಡಿದವ ಸೋಮನಾಥನೆಂಬುದು ಕಥೆ. ಕ್ಷಯ ಕುಷ್ಠದಂತಹ ರೋಗಗಳನ್ನು ನಾಶಮಾಡುವ ಕ್ಷೇತ್ರವೆಂದು ಪ್ರಸಿದ್ಧಿಯಾಗಿದೆ.

ಮಲ್ಲಿಕಾರ್ಜುನ (ಶ್ರೀಶೈಲ) :

ಆಂಧ್ರಪ್ರದೇಶದ ಕೃಷ್ಣಾನದಿಯ ತೀರದಲ್ಲಿ ಪ್ರಸಿದ್ಧಕ್ಷೇತ್ರ. ಶ್ರೀಶೈಲದಲ್ಲಿಯ ಆರಾಧ್ಯ – ಶಿವ, ಮಲ್ಲಿಕಾರ್ಜುನ. ಇಲ್ಲಿರುವ ದೇವಾಲಯ ದೊಡ್ಡ ಕೋಟೆಯಂತಿದೆ. ಲಿಂಗವು 8 ಅಂಗುಲದಷ್ಟಿದೆ. ತನ್ನ ಮಗನಾದ ಕುಮಾರಸ್ವಾಮಿಯನ್ನು ಕಾಣಲು ಇಲ್ಲಿ ಶಿವನು ಬಂದನೆಂದು ಪ್ರತೀತಿ. ದಕ್ಷಿಣ ಕೈಲಾಸ ಎಂದು ಎನ್ನಿಸಿಕೊಂಡ ಶ್ರೀಶೈಲ ನಿಸರ್ಗ ರಮಣೀಯತೆ ಹೊಂದಿದ್ದು ಕನ್ನಡದ ಶರಣೆ ಅಕ್ಕಮಹಾದೇವಿ (ಉಡುತಡಿ) ಇಲ್ಲಿ ಮುಕ್ತಳಾದಳು. ಇದು ಮುಕ್ತಿ ಕ್ಷೇತ್ರ. ಆಂಧ್ರದ ಕರ್ನೂಲ್‌ನಿಂದ 77 ಮೈಲಿ ದೂರದ ಈ ಸ್ಥಳಕ್ಕೆ ಬಸ್ಸುಗಳ ಮುಖಾಂತರ ಹೋಗುವ ಏರ್ಪಾಡು ಇದೆ.

ಭೀಮಾಶಂಕರ :

ಭೀಮಾನದಿಯ ಉಗಮಸ್ಥಾನದಲ್ಲಿನ ಗುಡ್ಡಗಾಡು ಪ್ರದೇಶದಲ್ಲಿದೆ. ಮಹಾ



**ಶ್ರೀ ಬಿ. ಬಸವರಾಜ್ ಶೇಟ್**

ರಾಷ್ಟ್ರದ ರಾಜಧಾನಿ ಮುಂಬೈ ಪೂರ್ವಕ್ಕೆ ಪೂನಾ-ನಾಸಿಕಮಾರ್ಗದಲ್ಲಿ ಇರುವ ಈ ಜ್ಯೋತಿರ್ಲಿಂಗ ಕಠಿಣಮಾರ್ಗದಲ್ಲಿದೆ. ಸ್ಥಳ ಪುರಾಣದ ಪ್ರಕಾರ ಕರ್ಕಟಿ ಎಂಬುವವಳಿಗೆ ಕುಂಭಕರ್ಣನಿಂದ ಜನಿಸಿದ ಮಗನಾದ ಭೀಮಾಸುರನೊಡನೆ ಯುದ್ಧ ಮಾಡಿ ಅವನನ್ನು ನಾಶಮಾಡಿದ ಪುಣ್ಯಸ್ಥಳವೇ ಭೀಮಾಶಂಕರ ಜ್ಯೋತಿರ್ಲಿಂಗವು. ಇಲ್ಲಿ ಧರ್ಮಶಾಲೆ ಇದೆ. ಭೀಮಾಶಂಕರವು ಅತ್ಯಂತ ಪ್ರಾಚೀನ ಮಂದಿರ. ತ್ರಿಪುರಾಸುರನನ್ನು ಸಂಹರಿಸಿ ಶಂಕರನು ಇಲ್ಲಿ ವಿಶ್ರಾಂತಿ ಪಡೆದನು.

ತ್ರ್ಯಂಬಕೇಶ್ವರ:

ಇದು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದು. ಸೂಕ್ಷ್ಮವಾಗಿ ನೋಡಿದಾಗ ಮೂರು ಲಿಂಗಗಳು ಗೋಚರಿಸುವುವು. (ಬ್ರಹ್ಮ, ವಿಷ್ಣು, ಮಹೇಶ್ವರ) ನಾಸಿಕದಿಂದ 18 ಮೈಲು ದೂರದಲ್ಲಿದೆ. ಬಸ್ ಸೌಕರ್ಯವಿದೆ. ಇಲ್ಲಿ ಬ್ರಹ್ಮಗಿರಿ, ನೀಲಗಿರಿ, ಗಂಗಾದ್ವಾರವೆಂಬ ಮೂರು ಪರ್ವತಗಳಿವೆ. ಗೋದಾವರಿನದಿಯ ಉಗಮಸ್ಥಾನವಿದು. ಜ್ಯೋತಿರ್ಲಿಂಗವು ಒರಳಿನ ಆಕಾರದಲ್ಲಿದೆ. ಈಶ್ವರ ಲಿಂಗದ ತಲೆಯು ಮೇಲಿಂದಲೇ ಗಂಗೆಯು ಪ್ರಕಟವಾಗಿ ಧಾರೆಯಾಗಿ ಈಗಲೂ ಹರಿಯುತ್ತಿದೆ. ಗುರುವು ಸಿಂಹರಾಶಿಗೆ ಬಂದಾಗ ಇಲ್ಲಿ ಕುಂಭಮೇಳ ನಡೆಯುತ್ತದೆ. ಹತ್ತಿರದ ಚಕ್ರತೀರ್ಥವು ಅಡವಿಯಲ್ಲಿದ್ದು ಗುಪ್ತಳಾದ ಗೋದಾವರಿ ಇಲ್ಲಿ ಪ್ರಕಟಳಾಗುವಳು. ಮುಂದೆ ರಾಮ – ಲಕ್ಷ್ಮಣರ ಮೂರ್ತಿಗಳಿವೆ.

ರಾಮೇಶ್ವರ ಲಿಂಗ:

ದಕ್ಷಿಣ ಭಾರತದ ಅತ್ಯಂತ ಪ್ರಸಿದ್ಧ ಶಿವಕ್ಷೇತ್ರ. ತಮಿಳುನಾಡಿನ ಮಧುರೆಯಿಂದ ರೈಲಿನಲ್ಲಿ ಹೋಗಬಹುದು. ವನವಾಸದ ಅವಧಿಯಲ್ಲಿ ಶ್ರೀರಾಮನು ಲಂಕೆಗೆ ಹೋಗುವಾಗ ಮೊದಲು ಪೂಜಿಸಿದ ಲಿಂಗವಿದು. ಗಂಗಾನದಿಯ ನೀರನ್ನು ತಂದು ಅಭಿಷೇಕ ಮಾಡುವುದು ಇಲ್ಲಿ ವಾಡಿಕೆ. ರಾಮೇಶ್ವರವು ಸಮುದ್ರತೀರದಲ್ಲಿ ಸ್ಥಿರವಾಗಿದೆ. ರಾಮೇಶ್ವರದಲ್ಲಿ ಧರ್ಮಶಾಲೆಗಳೂ. ಸತ್ರಗಳೂ ಇವೆ ಇಲ್ಲಿ 25 ತೀರ್ಥಗಳಿವೆ. ಇಲ್ಲಿಯ ಹವೆಯು ಉಷ್ಣದಿಂದ ಕೂಡಿದೆ. ರಾಮೇಶ್ವರ ದೇವಸ್ಥಾನವು 1000 × 600 × 150 ಅಡಿಗಳ ವಿಸ್ತೀರ್ಣದಲ್ಲಿದೆ. ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ಎತ್ತರವಾದ ಗೋಪುರಗಳಿವೆ. ಶ್ರೀ ರಾಮೇಶ್ವರ ಮಂದಿರದ ಮುಂದಿನ ಮಗ್ಗಲು ಸ್ವರ್ಣಮಂಡಿತಸ್ತಂಭವಿದೆ. ಅದರ ಹತ್ತಿರ ವಿಶಾಲ ಶ್ವೇತವರ್ಣದ ನಂದಿ (ಬಸವಣ್ಣ) ಮೂರ್ತಿ ಇರುವುದು. (15 ಅಡಿ ಎತ್ತರ 8 ಅಡಿ ಅಗಲ 9 ಅಡಿ ಉದ್ದ) ನಂದಿಯ ಎದುರಿಗೆ ಅರಬ್ಬೀ ಸಮುದ್ರ, ಬಂಗಾಲ ಉಪಸಾಗರಗಳು ಇರುತ್ತವೆ. ಆಂಜನೇಯನು ತಂದಿಟ್ಟ ವಿಶ್ವನಾಥಲಿಂಗ ದರ್ಶನ, ಪೂಜೆ ನಂತರ ಶ್ರೀ ರಾಮೇಶ್ವರ ದರ್ಶನ ಪಡೆಯುತ್ತಾರೆ.

ಮಹಾಕಾಲೇಶ್ವರ:

ಮಧ್ಯ ಭಾರತದ ಶಿಪ್ರಾನದಿಯ ದಂಡೆಯ ಮೇಲೆ ಇರುವ ಪ್ರಾಚೀನ ನಗರ ಅವಂತಿಕಾನಗರ. ಇಲ್ಲಿ ಕಾಳಿದಾಸನಕಾವ್ಯಗಳಲ್ಲಿ ಪ್ರಸಿದ್ಧಿಪಡೆದ ಮಹಾಕಾಲೇಶ್ವರ ಲಿಂಗವಿದೆ. ಇದು ವಿಕ್ರಮಾದಿತ್ಯನ ನ್ಯಾಯ

ಸಿಂಹಾಸನದ ಪ್ರಸಿದ್ಧ ಸ್ಥಳ. ಕೃಷ್ಣ ಬಲರಾಮ-ಸುಧಾಮರ ಗುರುವಾದ ಸಾಂದೀಪನಿ ಋಷಿಯ ಆಶ್ರಮ ಇಲ್ಲೇ ಇತ್ತು. "ದೂಷಣ"ನೆಂಬ ರಾಕ್ಷಸನ ಸಂಹಾರಕ್ಕಾಗಿ ಶಿವನು ಇಲ್ಲಿ ಮಹಾಕಾಲೇಶ್ವರನಾಗಿ ನೆಲಸಿದನು. ಇದನ್ನು ಮೂರನೇ ಜ್ಯೋತಿರ್ಲಿಂಗವೆನ್ನುತ್ತಾರೆ. ಸತೀದೇವಿಯ ಮೊಳಕೈಭಾಗವು ಇಲ್ಲಿ ಬಿದ್ದುದರಿಂದ ಇದು ಶಕ್ತಿ ಪೀಠವೂ ಆಗಿದೆ. ಬೆಳಗಿನ ಜಾವದಲ್ಲಿ ಚಿತಾಭಸ್ಮವನ್ನು ಮಹಾಕಾಲೇಶ್ವರನಿಗೆ ಅರ್ಪಿಸುವುದು ಇಲ್ಲಿಯ ವಿಶಿಷ್ಟ ಸೇವೆಗಳಲ್ಲಿ ಒಂದು. ಗೊಲ್ಲರ ಬಾಲಕನಿಗೆ ಒಲಿದ ಶಿವನೆಂಬ ಪ್ರಸಿದ್ಧಿ ಈ ಸ್ಥಳಕ್ಕಿದೆ. ಉಜ್ಜಯಿನಿ ರೈಲ್ವೆ, ಬಸ್‌ಸೌಕರ್ಯ ಒಳಗೊಂಡಿದೆ.

ಓಂಕಾರೇಶ್ವರ:

ಒಂದೇ ಲಿಂಗದ ಎರಡು ಭಾಗವನ್ನು ಓಂಕಾರೇಶ್ವರನೆಂದೂ ಮತ್ತು ಅಮರೇಶ್ವರನೆಂದೂ ಪೂಜಿಸಲ್ಪಡುವ ಈ ಜ್ಯೋತಿರ್ಲಿಂಗವು ನಾಲ್ಕನೆಯದು. ಇಲ್ಲಿ ವಿಶೇಷ ಓಂಕಾರೇಶ್ವರವು ಸ್ವಯಂಭು ಲಿಂಗವಾಗಿದ್ದು, ಅದಕ್ಕೆ 4 ಕಡೆಯಿಂದ ಜಲ ಸ್ರವಿಸುತ್ತದೆ. ಮತ್ತು ಅಭಿಷೇಕವಾದ ನೀರು ನರ್ಮದಾನದಿಯನ್ನು ಸೇರುತ್ತದೆ. ವಿಂಧ್ಯ ಪರ್ವತ ರಾಜನ ಪ್ರಾರ್ಥನೆಯಂತೆ, ಇಲ್ಲಿ ಲಿಂಗವು ಎರಡು ಭಾಗವಾಯಿತು ಎನ್ನುತ್ತಾರೆ. ಉಜ್ಜಯಿನಿಯಿಂದ 90 ಮೈಲು ದೂರದಲ್ಲಿ ಮಧ್ಯಭಾರತದ ಮಾಳವ ಪ್ರದೇಶದಲ್ಲಿ ನರ್ಮದಾನದಿಯ ದಂಡೆಯ ಮೇಲೆ ಇರುವ ಈ ಜ್ಯೋತಿರ್ಲಿಂಗದೇವಾಲಯವು ಪಶ್ಚಿಮ ರೈಲ್ವೆಯ ಓಂಕಾರೇಶ್ವರ ರೋಡ್ ಸ್ಟೇಷನ್‌ನಿಂದ 7 ಮೈಲಿ ದೂರದಲ್ಲಿದೆ.

ಕೇದಾರನಾಥ:

ನರನಾರಾಯಣ ಋಷಿಗಳಿಗೆ ಪ್ರತ್ಯಕ್ಷನಾಗಿ ಶಿವನು ಇಲ್ಲಿ ನೆಲಸಿದನೆಂದು ಹೇಳಿಕೆ ಇದೆ. ಹಿಮಾಲಯದ ಹರಿದ್ವಾರದಿಂದ 150 ಮೈಲಿ ದೂರದ ಕೇದಾರನಾಥ ಜ್ಯೋತಿರ್ಲಿಂಗವು ಗಂಗಾನದಿಯ ಶಾಖೆಯಾದ ಅಲಕಾನಂದ ನದಿಯ ತೀರದಲ್ಲಿದೆ ಈ ಲಿಂಗವನ್ನು ನೋಡಲು ದೀಪದ ಸಹಾಯ ಬೇಕು. ಲಿಂಗದ ಒಂದು ಭಾಗಕ್ಕೆ ಜಲ ಪುಷ್ಪ ಅರ್ಚನೆ ಮಾಡಿ ಲಿಂಗವನ್ನು ಅಪ್ಪಿಕೊಳ್ಳುವುದು ಇಲ್ಲಿಯ ಮುಖ್ಯ ಸೇವೆ.

ಕಾಶೀವಿಶ್ವನಾಥ:

ಸುಪ್ರಸಿದ್ಧ ಕಾಶೀಕ್ಷೇತ್ರ, ವಿಶ್ವದ ಒಡೆಯನಾದ ವಿಶ್ವೇಶ್ವರನು ಲಿಂಗರೂಪದಲ್ಲಿ ಇಲ್ಲಿ ನೆಲಸಿದ್ದಾನೆ. ಇದು 7ನೇ ಜ್ಯೋತಿರ್ಲಿಂಗವು. ಭಾರತದಲ್ಲಿ ಅತ್ಯಂತ ಪ್ರಸಿದ್ಧವಾದ ಕ್ಷೇತ್ರವಾಗಿದೆ. ಶಿವನ ಸನ್ನಿಧಾನವೆಂದು ಪ್ರಸಿದ್ಧವಾದ ಕೈಲಾಸದಿಂದ ಹರಿದು ಬರುವ ಪ್ರವಾಹಗಳು, ಮಾರುತಗಳು ಹಾಗೂ ಗಂಗೋತ್ರಿ, ಯಮುನೋತ್ರಿಯಿಂದ ಬರುವ ಭಾಗೀರಥಿ, ಗಂಗಾ, ಹಾಗೂ ಯಮುನೆಯರ ಪುಣ್ಯಸ್ಥಳಗಳಿಂದ, ಶಿವಶಕ್ತಿಯಿಂದ ಬಹುಗಣಿತವಾಗಿವೆ. ರಾವಣನು ಕೈಲಾಸ ನಡುಗಿಸಿದನಂತೆ. ಕಾಶಿಯ ವಿಶ್ವನಾಥನು ಪಂಡಾಗಳ ಮುಷ್ಟಿಯಿಂದ ದಾಟಿಕೊಳ್ಳಲು ಇನ್ನು ಸಾಧ್ಯವಾಗಿಲ್ಲ. ಕಾಶಿಯಲ್ಲಿ ಸತ್ತವರನ್ನು 'ಪುಣ್ಯವಂತ'ನೆನ್ನುತ್ತಾರೆ. ಕಾಶಿಯು ಉತ್ತರ ರೈಲ್ವೆಯ ಮೊಗಲ್ ಸರಾಯ್ ಜಂಕ್ಷನ್‌ದಿಂದ ಸ್ವಲ್ಪದೂರದಲ್ಲಿ ಇರುವ ವಾರಣಾಸಿಯೇ ಕಾಶೀಕ್ಷೇತ್ರ.

ಘುಶ್ಮೇಶ್ವರ ಲಿಂಗ:

ಆಂಧ್ರಪ್ರದೇಶದ ಮನ್ಮಿತಂ ಜಂಕ್ಷನಸಿಂದ 66 ಮೈಲು ಎಲ್ಲೋರ ಗುಹೆಗಳ ಸಮೀಪ ಘುಶ್ಮೇಶ್ವರ ಲಿಂಗವಿದೆ. ಮಕ್ಕಳಿಲ್ಲವೆಂದು ಪಕ್ಕದ ಮನೆಯವರು ಮಾಡಿದ ನಿಂದನೆಗೆ ಮನನೊಂದ ಸುದೇಹಿಯು ಪತಿ ಸುಧರ್ಮನೊಡನೆ ಪ್ರಾರ್ಥಿಸಿ; ಒಲಿಸಿ ಕೊನೆಗೆ ಈರ್ಷೆಯನ್ನು ತಾಳಿ ರಕ್ತ ರಂಜಿತ ಸೇಡಿನಿಂದ ಹೊರಟು, ತನ್ನ ತಂಗಿ ಘುಶ್ಮೆಯ ಮಗುವನ್ನು ಕೊಂದರೂ, ತಾಯಿ ಘುಶ್ಮೆ ಶಿವನನ್ನು ಪ್ರಾರ್ಥಿಸಿ ಲೋಕ ರಕ್ಷಣೆಗಾಗಿ ಲಿಂಗ ಪ್ರತಿಷ್ಠೆ ಮಾಡಿದ ಕಥೆಯು ಹಿನ್ನೆಲೆಯಲ್ಲಿ ಈ ಜ್ಯೋತಿರ್ಲಿಂಗವಿದೆ.

ನಾಗಾನಾಥ ಜ್ಯೋತಿರ್ಲಿಂಗ:

ಸ್ಥಳ ಪುರಾಣದ ಪ್ರಕಾರ ಪಾರ್ವತಿಯ ವರಪಡೆದು ಉನ್ಮತ್ತಳಾದ ದಾರುಕಾ ರಾಕ್ಷಸಿಯ ಹಿಂಸೆ ಅತಿಯಾಯಿತು. ಸುಪ್ರಿಯನೆಂಬ ಶಿವ ಭಕ್ತನು ಸೆರೆಮನೆಯಲ್ಲಿಯೂ ನಿಶ್ಚಿಂತನಾಗಿ ಶಿವ ಪೂಜೆ ಮಾಡುವುದನ್ನು ತಿಳಿದು ದಂಡಿಸಲು ಹೊರಟಾಗ ತಮ್ಮ ಭಕ್ತರ ರಕ್ಷಣೆಗಾಗಿ ಶಿವ ಪಾರ್ವತಿ ಇಬ್ಬರೂ ಈ ಸ್ಥಳದಲ್ಲೇ ನೆಲಸಿದರಂತೆ. ಮಹಾರಾಷ್ಟ್ರದಲ್ಲಿ ಪರಭಣಿಯಿಂದ ಜೊಂಡಿ ಎಂಬ ಸ್ಟೇಶನ್‌ನಲ್ಲಿ ಇಳಿದು ದಾರುಕಾವನದ ನಾಗೇಶ್ವರನನ್ನು ನೋಡಲು ಅನುಕೂಲವಿದೆ. ದ್ವಾರಕಾ ಸಮೀಪವೂ ಇನ್ನೊಂದು ನಾಗೇಶ್ವರದೇವಾಲಯವಿದ್ದು ಅದನ್ನೇ ಜ್ಯೋತಿರ್ಲಿಂಗವೆಂದೂ ಹೇಳುತ್ತಾರೆ.

ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಂ
ಉಜ್ಜಯಿನ್ಯಾಂ ಮಹಾಕಾಲಂ, ಓಂಕಾರಮಮಲೇಶ್ವರೇ ||೧||

ಕೇದಾರಂ ಹಿಮಪಾರ್ಶ್ವೇ ಚ ಡಾಕಿನ್ಯಾಂ ಭೀಮಶಂಕರಃ।
ವಾರಣಾಸ್ಯಾಂ ಚ ವಿಶ್ವೇಶ್ವಂ, ತ್ರ್ಯಂಬಕಂ ಗೌತಮೀ ತಟೇ ||೨||

ಪಾರಲ್ಯಾಂ ವೈದ್ಯನಾಥಂ ಚ ನಾಗೇಶಂ ದಾರುಕಾವನೇ।
ಸೇತುಬಂಧೇ ಚ ರಾಮೇಶಂ ಧಿಶಣೇಶಂ ಶಿವಾಲಯೇ ||೩||

ದ್ವಾದಶೈತಾನಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್।
ಸಪ್ತ ಜನ್ಮಕೃತಂ ಪಾಪಂ ಸ್ಮರಣೇನ ವಿನಶ್ಯತಿ ||೪||

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಪರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ವೈದ್ಯನಾಥ ಲಿಂಗ:

ಮಹಾರಾಷ್ಟ್ರದ ಪರಭಣಿ ಜಂಕ್ಷನ್‌ನಿಂದ ಮೋಟಾರ್‌ನಲ್ಲಿ ಹೋಗಬೇಕು. ಇಲ್ಲಿಯ ತೀರ್ಥಜಲದಿಂದ ಕುಷ್ಠರೋಗ ನಿವಾರಣೆ ಆಗುತ್ತದೆ ಎಂಬ ಭಾವನೆ ಇದೆ. ದಕ್ಷ ಯಜ್ಞದ ನಂತರ ಸತಿಯದೇಹವನ್ನು ಹೊತ್ತು ತಿರುಗುವಾಗ ಸತಿಯ ಹೃದಯ ಭಾಗವು ಇಲ್ಲಿ ಬಿದ್ದಿತೆಂದು ಆಖ್ಯಾಯಿಕೆ. ರಾವಣನು ಶಿವನ ಒಲುಮೆ ಪಡೆಯಲು ತಪಸ್ಸುಮಾಡಿದರೂ ಶಿವ ಒಲಿಯದಿದ್ದರಿಂದ ತನ್ನ ಒಂದೊಂದು ತಲೆಯನ್ನು ಅಗ್ನಿಗೆ ಅರ್ಪಿಸಿದನು. ಹತ್ತನೇ ತಲೆ ಕತ್ತರಿಸಲು ಹೋದಾಗ ಶಿವನು ಒಲಿದು ರಾವಣನಿಗೆ ಅಸಮಾನಬಲವನ್ನು ಅನುಗ್ರಹಿಸಿದನು. ಮತ್ತು ಲಂಕೆಗೆ ಒಯ್ದು ಸ್ಥಾಪಿಸಲು ಲಿಂಗವನ್ನು ಅನುಗ್ರಹಿಸಿದನು. ವೈದ್ಯನಂತೆ ರಾವಣನ ತಲೆಗಳನ್ನು ಪುನಃ ಹೊಂದಿಸಿದ್ದರಿಂದ ಈ ಹೆಸರು ಬಂದಿತೆಂದು ಸ್ಥಳ ಪುರಾಣವಿದೆ.

—



**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

(೨ನೇ ಪುಟದಿಂದ)

ಶೈಲಿಯ ಸೌಂದರ್ಯ, ನೈತಿಕ ಉತ್ಸಾಹ, ಆಳವಾದ ಆಧ್ಯಾತ್ಮಿಕ ದೃಷ್ಟಿ, – ಇವು ಅವರ ಕೃತಿಗಳ ಪ್ರಧಾನ ಗುಣಗಳು. ಕವಿಯಾಗಿ, ದಾರ್ಶನಿಕರಾಗಿ, ಜಿಜ್ಞಾಸುವಾಗಿ, ವಾದಚತುರರಾಗಿ, ಜನಪ್ರಿಯರಾಗಿ ಇವರು ಅಷ್ಟೇ ಮಹತ್ವವುಳ್ಳವರಾಗಿದ್ದಾರೆ. ಇವರ ಕೃತಿಗಳಲ್ಲಿ ಆಳ್ವಾರರ ಪ್ರಬಂಧಗಳಂತಹ ಗ್ರಂಥಗಳೇ ಅಲ್ಲದೆ ವ್ಯಾಖ್ಯಾನ, ಭಾಷ್ಯ, ಸ್ವತಂತ್ರ ಗ್ರಂಥಗಳೂ ಸೇರಿವೆ. ಅವುಗಳನ್ನು ಸಾಮಾನ್ಯವಾಗಿ ಒಂಭತ್ತು ಭಾಗಗಳಾಗಿ ವಿಭಾಗಿಸಬಹುದು. ೧. ವಿವಿಧ ದೇವತೆ ಮತ್ತು ಆಚಾರ್ಯರ ಸ್ತೋತ್ರಗಳು. ೨. ವಿಶಿಷ್ಟಾದ್ವೈತ ತತ್ತ್ವವನ್ನು ಪ್ರತಿಪಾದಿಸುವ – ವಿಶದೀಕರಿಸುವ ಗ್ರಂಥಗಳು. ೩. ಆಳ್ವಾರರ ಗ್ರಂಥಗಳನ್ನು ಪ್ರಸ್ಥಾನ ತ್ರಯಗಳೊಂದಿಗೆ ಸಮನ್ವಯಮಾಡುವ ಕೃತಿಗಳು. ೪. ಶ್ರೀ ವೈಷ್ಣವ ರಹಸ್ಯಗಳು. ೫. ವಿವಿಧ ವಿಷಯಕವಾದ ದ್ರಾವಿಡ ಪ್ರಬಂಧಗಳು ೬. ಸಂಸ್ಕೃತ ನಾಟಕಗಳು ೭. ಪ್ರತಿಪಕ್ಷದ ಖಂಡನಾತ್ಮಕವಾದ ಗ್ರಂಥಗಳು. ೮. ನಿತ್ಯ ಜೀವನಕ್ಕೆ ಸಂಬಂಧಪಟ್ಟ ನೈತಿಕ ಕೃತಿಗಳು. ೯. ಸಂಕೀರ್ಣ ಗ್ರಂಥಗಳು (ಇತರ ಕೃತಿಗಳು). ಇವು ಅವರ ಜೀವಂತ ಕಾಲದಲ್ಲಿಯೇ ಇವರಿಗೆ 'ಕವಿತಾರ್ಕಿಕಸಿಂಹ', 'ಸರ್ವತಂತ್ರ ಸ್ವತಂತ್ರ' ಎಂಬ ಪ್ರಶಸ್ತಿಗಳನ್ನು ತಂದುಕೊಟ್ಟವು. ಆದರ್ಶ ಭಕ್ತರೂ, ವಿದ್ವಾಂಸರೂ, ಉಚ್ಚಮಾನವೀಯ ಗುಣಗಳಿಂದ ಕೂಡಿದವರೂ ಆದ ಇವರ ಶೀಲ ಸೌಂದರ್ಯವನ್ನು ಪ್ರಕಟಪಡಿಸುವ ಅನೇಕ ಕತೆಗಳು ಪ್ರಚಾರದಲ್ಲಿವೆ. 'ಶ್ರುತಪ್ರಕಾಶಿಕಾ' ಗ್ರಂಥವನ್ನು ಉದ್ಧಾರಮಾಡಿದವರೂ ಇವರೇ. ಅದುದರಿಂದಲೇ ಶ್ರೀ ಭಾಷ್ಯವನ್ನು ಕಾಲಕ್ಷೇಪ ಮಾಡುವಾಗ ಪ್ರಾರಂಭದಲ್ಲಿ ಶಾಖಾಭೇದಗಳನ್ನು ಲಕ್ಷಿಸದೆ ಇವರ ತನಿಯನ್ ಅನ್ನು ಅನುಸಂಧಾನ ಮಾಡುತ್ತಾರೆ. ವೇದಾಂತದೇಶಿಕರು ತಮ್ಮ ಅವತಾರ ಪೂರ್ಣವಾಗುವವರೆಗೂ ಶ್ರೀರಂಗದಲ್ಲಿಯೇ ನೆಲೆಸಿದ್ದು ಅಲ್ಲಿಯ ಶ್ರೀ ವೈಷ್ಣವ ಸಂಗಡದ ಆಚಾರ್ಯಪೀಠವನ್ನಲಂಕರಿಸಿ ಶ್ರೀ ರಂಗನಾಥನ ದೇವಸ್ಥಾನದಲ್ಲಿ ಪೂಜಾದಿಗಳಿಗುಂಟಾಗಿದ್ದ ವಿಘ್ನಗಳನ್ನು ನಿವಾರಿಸಿ ಆಳ್ವಾರುಗಳ ಸಿದ್ಧಾಂತಮಾರ್ಗವನ್ನು ಊರ್ಜಿತಗೊಳಿಸಿದರು. ಇವರ ಅಂತ್ಯಕಾಲದಲ್ಲಿಯೇ ಬೊಪ್ಪಣ್ಣ ಒಡೆಯರಿಂದ ತಿರುಪತಿಯಲ್ಲಿ ಬಿಜಯಮಾಡಿದ್ದ ರಂಗನಾಥ ಸ್ವಾಮಿಯವರ ಉತ್ಸವ ವಿಗ್ರಹವು ಶ್ರೀರಂಗದಲ್ಲಿ ಪುನಃ ಪ್ರತಿಷ್ಠಿತವಾಯಿತು. ಆ ಸಂದರ್ಭದಲ್ಲಿ ಅವರು ಹಾಡಿದ ಮಂಗಳಾಶಾಸನ ಪದ್ಯಗಳು ಶಾಸನಸ್ಥವಾಗಿವೆ.

ವೇದಾಂತದೇಶಿಕರು ಸ್ವರ್ಗಸ್ಥರಾದ ಮೇಲೆ ಆಚಾರ್ಯಪೀಠವು ಅವರ ಕುಮಾರರಾದ ನಯನಾರ್ ಅಥವಾ ವರದಾಚಾರ್ಯರಿಗೆ ಲಭಿಸಿತು. ವರದಾಚಾರ್ಯರಾಗಲೀ ಇತರರಾಗಲೀ ಶ್ರೀ ವೈಷ್ಣವರ ದೊಡ್ಡ ಸಮುದಾಯವನ್ನು ಒಟ್ಟುಗೂಡಿಸಿ ಆಳಲು ಸಿದ್ಧರಾಗಿರಲಿಲ್ಲ. ವೇದಾಂತದೇಶಿಕರ ಪ್ರತ್ಯಕ್ಷ ಶಿಷ್ಯರಾದ ಬ್ರಹ್ಮತಂತ್ರ ಸ್ವತಂತ್ರ ಜೀಯರೆಂಬುವರು ತಿರುಪತಿಗೆ ಹೋಗಿ ನೆಲಸಿ ಸಾಮಾನ್ಯಜನರ ಸಂಪರ್ಕವನ್ನೇ ಕಳೆದುಕೊಂಡರು. ಇವರ ಪರಂಪರೆಯವರೇ ಮುಂದೆ ೧೭ ನೇ ಶತಮಾನದಲ್ಲಿ ಮೈಸೂರರಸರ ಪ್ರಾರ್ಥನೆಯ ಮೇರೆಗೆ ಮೈಸೂರುದೇಶಕ್ಕೆ ದಯಮಾಡಿಸಿ ಮಠವನ್ನು ಸ್ಥಾಪಿಸಿ ರಾಜಗುರುಗಳಾದರು. ಆ ಪರಂಪರೆಯು ಈಗಲೂ ಮೈಸೂರಿನಲ್ಲಿ ಬಹು ಯಶಸ್ವಿಯಾಗಿ ಕೆಲಸಮಾಡುತ್ತಿದೆ. ಈ ಪರಂಪರೆಯ ಮಠಾಧಿಪತಿಗಳಲ್ಲಿ ಅನೇಕರು ಪಂಡಿತೋತ್ತಮರಾಗಿ ದ್ರಾವಿಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಉತ್ತಮ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪೆರಿಯಪರಕಾಲಸ್ವಾಮಿಗಳ ನಮ್ಮಾಳ್ವಾರರ ತಿರುವಾಯ್‌ಮೊಳಿಯ ವ್ಯಾಖ್ಯಾನವಾದ ಪದಿನೆಣ್‌ನಾಯಿರಪ್ಪಡಿ, ಕೃಷ್ಣ ಬ್ರಹ್ಮತಂತ್ರ ಪರಕಾಲಸ್ವಾಮಿಗಳವರ ಅಲಂಕಾರ ಶಾಸ್ತ್ರಗ್ರಂಥವಾದ 'ಅಲಂಕಾರ ಮಣಿಹಾರ', ಅಭಿನವ ರಂಗನಾಥಪರಕಾಲಸ್ವಾಮಿಗಳವರ, ಶ್ರೀ ವೇದಾಂತದೇಶಿಕರವರ 'ತತ್ತ್ವಮುಕ್ತಾಕಲಾಪ'ದ ವ್ಯಾಖ್ಯಾನವಾದ 'ಭಾವಪ್ರಕಾಶಿನಿ' ಯೂ ಚಿರಸ್ಥಾಯಿಯಾಗಿರುವುವು.

ವೇದಾಂತದೇಶಿಕರಾದ ಮೇಲೆ ಉಂಟಾದ ಅವ್ಯವಸ್ಥೆಯ ಪರಿಣಾಮವಾಗಿ ವಡಗಲೆ ಶ್ರೀ ವೈಷ್ಣವರು ತಮ್ಮ ಪ್ರತ್ಯೇಕ ಆಚಾರ್ಯರುಗಳನ್ನು ಆರಿಸಿಕೊಳ್ಳಬೇಕಾಯಿತು. ಪ್ರಾಂತೀಯ ಗುಂಪುಗಳಾಗಿ ಒಡೆಯುವಿಕೆಯೂ, ಗೃಹಸ್ಥರು ಆಚಾರ್ಯತ್ವವನ್ನು ವಹಿಸುವುದರಿಂದ ಉಂಟಾದ ಅಸಮರ್ಥತೆಯಿಂದಲೂ, ಹಳೆಯ ಮಾದರಿಯಲ್ಲಿ ಎಲ್ಲ ವೈಷ್ಣವರನ್ನು ಒಟ್ಟುಗೂಡಿಸುವ ಚಳುವಳಿಯೊಂದು ಪ್ರಾರಂಭವಾಯಿತು. ಈ ಪ್ರಯತ್ನದ ನಾಯಕರು ಅಹೋಬಿಲ ಮಠದ ಮೂಲಸ್ಥಾಪಕರಾದ ಆದಿವಣ್ ಶಠಗೋಪಸ್ವಾಮಿಗಳು. ಇವರ ಮೊದಲ ಹೆಸರು ಶ್ರೀನಿವಾಸಾಚಾರ್ಯರೆಂದು. ಇವರು ಮೈಸೂರುದೇಶದ ಮೇಲುಕೋಟೆಯವರು. ಶಠಗೋಪರು ಶ್ರೀವೈಷ್ಣವರ ಎರಡು ಶಾಖೆಗಳನ್ನು ಸಮನ್ವಯಗೊಳಿಸುವ ಸೂಕ್ತ ಮಾರ್ಗವನ್ನು ಕಂಡುಹಿಡಿಯಲು ಪ್ರಯತ್ನಪಟ್ಟರು. ಅದು ಸಾಧ್ಯವಾಗಲಿಲ್ಲವಾಗಿ ವಡಗಲೆ ಸಮುದಾಯದ ಬೃಹತ್ಸಮೂಹಕ್ಕೆ ಆಚಾರ್ಯರಾದರು. ಇವರು ಸನ್ಯಾಸವನ್ನು ಸ್ವೀಕರಿಸಿ ನೃಸಿಂಹ–ನಾಮಾಂಕಿತವಾದ ತಮ್ಮ ಮಠದ ಆಶ್ರಯದಲ್ಲಿ ವಡಗಲೆಯವರನ್ನೆಲ್ಲಾ ಒಟ್ಟುಗೂಡಿಸಿ ದಕ್ಷಿಣಭಾರತದಲ್ಲಿ ವೇದಾಂತದೇಶಿಕ ಪಂಥವನ್ನು ಜನಪ್ರಿಯವಾಗಿಸಿದರು. ಎಲ್ಲೆಡೆಯಲ್ಲೂ ತಾವು ಆರಾಧಿಸುತ್ತಿದ್ದ ಲಕ್ಷ್ಮೀನೃಸಿಂಹನ ದಿವ್ಯಪಾದುಕಾಸೇವಕರಾಗಿ ನಡೆದುಕೊಂಡರು. ಅವರು ಅನೇಕ ಕಡೆಗಳಲ್ಲಿ ಶಾಖಾಮಠಗಳನ್ನು ಸ್ಥಾಪಿಸಿ ರಾಮಾನುಜ ಮತ್ತು ವೇದಾಂತದೇಶಿಕರ ಗ್ರಂಥಗಳನ್ನು ಬಹು



ಕೂಲಂಕಷವಾಗಿ ವ್ಯಾಸಂಗಮಾಡುವಂತೆ ಏರ್ಪಡಿಸಿದರು. ಶಠಗೋಪರು ತಾವು ನಿರ್ಮಿಸಿದ ಕದರಿ ಮೊದಲಾದ ದೇವಾಲಯಗಳಲ್ಲಿ ನಿಮ್ನವರ್ಗದವರಿಗೆ ಕೆಲವು ರಿಯಾಯಿತಿಗಳನ್ನು ಕೊಟ್ಟು, ದಲ್ಲದೆ ಗಿರಿಜನರ ಉದ್ಧಾರಕ್ಕಾಗಿ ಅಹೋಬಿಲ ದಾಸರೆಂಬ ಪ್ರಚಾರಕರನ್ನು ಏರ್ಪಡಿಸಿ ಅವರಿಗೆ ದೇವರ ಪ್ರಸಾದವನ್ನು ಅನುಗ್ರಹಿಸಿದರು.

ಶಠಗೋಪರ ಶಿಷ್ಯರಾದ ವೇಂಕಟನಾಥರೆಂಬ ಪೂರ್ವನಾಮಧೇಯವುಳ್ಳ ತೋಳಪ್ಪರು ಶ್ರೀ ವೈಷ್ಣವಾಚಾರಗಳನ್ನು ಕುರಿತ ಅನೇಕ ಕೃತಿಗಳನ್ನು ರಚಿಸಿದರು. ಇದರಿಂದ ಅವರಿಗೆ ವೈದಿಕ ಸಾರ್ವಭೌಮ ಎಂಬ ಪ್ರಶಸ್ತಿ ದೊರಕಿತು. ಅವರ ಗ್ರಂಥಗಳಲ್ಲಿ ಆಗ ಪರಿಚಯವಾಗಿದ್ದ ಎಲ್ಲ ಸ್ಮೃತಿಗಳ ಸಂಗ್ರಹವಾದ ವೈದಿಕರ ನಿತ್ಯವ್ಯವಹಾರಗಳನ್ನು ಕುರಿತ 'ಸ್ಮೃತಿರತ್ನಾಕರ' ಅಥವಾ 'ಸದಾಚಾರಸಂಗ್ರಹ', ಆಪಸ್ತಂಭ ಗೃಹ್ಯಸೂತ್ರದ ಆಧಾರದ ಮೇಲೆ ರಚಿತವಾದ ೨೧ ಪ್ರಕರಣಗಳುಳ್ಳ 'ಗೃಹ್ಯರತ್ನ' ಮತ್ತು ಅದರ ವ್ಯಾಖ್ಯಾನವಾದ 'ಕಂಠಭೂಷಣ', ಔರ್ಧ್ವದೈಹಿಕಗಳಿಗೆ ಸಂಬಂಧಪಟ್ಟ 'ಪಿತೃಮೇಧಸಾರ' ಮತ್ತು 'ದಶನಿರ್ಣಯ' ಇವು ಪ್ರಧಾನವಾದವು.

ಆದಿವಣ್‌ಶಠಗೋಪಸ್ವಾಮಿಗಳಾದ ಮೇಲೆ ಆ ಪರಂಪರೆಯಲ್ಲಿ ಇಲ್ಲಿಯವರೆಗೆ ೪೪ ಜನ ಆ ಪೀಠವನ್ನಲಂಕರಿಸಿದ್ದಾರೆ. ಈ ಜೀಯರುಗಳು ತಮ್ಮ ಪರಿಸರದಲ್ಲೆಲ್ಲಾ ಸಂಚರಿಸಿ ಶಿಷ್ಯರಿಗೆ ಧಾರ್ಮಿಕ ವಿಷಯದಲ್ಲಿ ವಿಶೇಷ ನೆರವಾಗುತ್ತಿದ್ದಾರೆ. ಎರಡನೆಯ ಜೀಯರು ವಿವಿಧ ವಿಷಯಗಳನ್ನು ಕುರಿತ ಅನೇಕ ಗ್ರಂಥಗಳನ್ನು ರಚಿಸಿ ಅಭಿನವ ವೇದಾಂತ ದೇಶಿಕರೆಂಬ ಪ್ರಶಸ್ತಿಯನ್ನು ಪಡೆದಿದ್ದಾರೆ. ಆರನೆಯ ಪಟ್ಟಾಧಿಕಾರಿಗಳಾದ ಪರಾಂಕುಶ ಸ್ವಾಮಿಗಳು ವಿಜಯನಗರದ ಚಕ್ರವರ್ತಿಗಳಿಂದ ಗೌರವಿಸಲ್ಪಟ್ಟಿದ್ದಾರೆ. ಇವರ ಕಾಲದಲ್ಲಿಯೇ ವಿಜಯನಗರದ ಚಕ್ರಾಧಿಪತ್ಯದ ಆಶ್ರಯದಲ್ಲಿದ್ದ ದೇವಾಲಯಗಳಲ್ಲೆಲ್ಲಾ ಈ ಸಂಸ್ಥಾನದವರಿಗೆ ಅಗ್ರಮರ್ಯಾದೆ ದೊರೆತುದು. ಅವರಿಂದ ಮುಂದೆ ಬಂದವರು "ವಾಸಂತಿಕಾ ಪರಿಣಯ'' ಎಂಬ ನಾಟಕದ ಕರ್ತೃ. ಹದಿನಾಲ್ಕನೆಯ ಸ್ವಾಮಿಗಳ ಕಾಲದಲ್ಲಿಯೇ ಸಂಸ್ಕೃತ ವಿದ್ವಾಂಸರಲ್ಲಿ ಪ್ರಸಿದ್ಧರಾದ "ವಿಶ್ವಗುಣಾದರ್ಶ''ದ ಕೃತಿಕಾರರಾದ ಕಡಾಂಬಿ ವೆಂಕಟಾದ್ರಿ ಎಂಬುವರು ಜೀವಿಸಿದ್ದುದು. 21ನೆಯ ಸ್ವಾಮಿಗಳೂ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ.

ಹೀಗೆ ವಡಗಲೆಯ ಪಂಗಡದವರನೇಕರು ಅಹೋಬಿಲ ಮಠದ ಶಿಷ್ಯರಾಗಿರುವಾಗಲೇ ಇತರರನೇಕರು ತಮ್ಮ ಪ್ರತ್ಯೇಕ ಮನೆತನಕ್ಕೆ ಸೇರಿದಂತೆ ಪ್ರತ್ಯೇಕ ಆಚಾರ್ಯರುಗಳನ್ನು ಹೊಂದಿರುತ್ತಾರೆ. ಅವರು ಸ್ವಯಮಾಚಾರ್ಯ ಪುರುಷರೆಂದು ಪ್ರಸಿದ್ಧರಾಗಿದ್ದಾರೆ. ಅವರೆಲ್ಲಾ ಮುನಿತ್ರಯ ಸಂಪ್ರದಾಯದವರೆಂದು ಕರೆದುಕೊಳ್ಳುತ್ತಾರೆ. ಕ್ರಿ. ಶ. 18 ನೇ ಶತಕದಲ್ಲಿದ್ದ ಶ್ರೀನಿವಾಸ, ರಂಗನಾಥ ಮತ್ತು ವೇದಾಂತ ರಾಮಾನುಜ ಎಂಬ ಮುನಿತ್ರಯರಿಂದ ರೂಪಿತವಾದುದರಿಂದ ಇದಕ್ಕೆ ಈ ಹೆಸರು ಬಂದಿದೆ. ನಾಥಮುನಿ ಯಾಮುನಮುನಿ ಮತು ರಾಮಾನುಜಮುನಿಗಳಿಂದ ಈ ಹೆಸರು ಬಂದಿದೆ ಎಂದೂ ಕೆಲವರು ಹೇಳುತ್ತಾರೆ. ಈ ಪಂಥದ ಮೂಲಸ್ಥಾಪಕರು ಗೋಪಾಲ ದೇಶಿಕರೆಂಬುವರು. ಇವರು ವೇದಾಂತ ದೇಶಿಕರ ಗ್ರಂಥಗಳನ್ನು ಕೂಲಂಕಷವಾಗಿ ವ್ಯಾಸಂಗಮಾಡಲು ಹೆಚ್ಚು ಸೌಕರ್ಯವಾಗುವಂತೆ ಅನೇಕ ವ್ಯಾಖ್ಯಾನಗಳನ್ನೂ ಸ್ವತಂತ್ರ ಗ್ರಂಥಗಳನ್ನೂ ರಚಿಸಿದ್ದಾರೆ. ಇವರ ಆಹ್ನಿಕ ಗ್ರಂಥವು ಪ್ರಸಿದ್ಧವಾಗಿದೆ- ಒಟ್ಟಿನಲ್ಲಿ ಮುನಿತ್ರಯರು ಆಚಾರಶೀಲರೂ ಪ್ರತ್ಯೇಕತಾ ಮನೋಭಾವ ಉಳ್ಳವರೂ ಆಗಿದ್ದಾರೆ. ಕಳೆದ 150 ವರ್ಷಗಳಿಂದ ಈ ಪರಂಪರೆಯು ಅನೇಕ ಸನ್ಯಾಸಿಗಳ ಶ್ರೇಣಿಯಿಂದ ಬೆಳೆದುಬಂದಿದೆ. ಪಂಥಾನುಯಾಯಿಗಳೇ ಆದ ರಂಗರಾಮಾನುಜರು ಉಪನಿಷತ್ತುಗಳ ವ್ಯಾಖ್ಯಾನವನ್ನೂ ರಚಿಸಿ ಶ್ರೀವೈಷ್ಣವ ಧಾರ್ಮಿಕ – ಸಾಹಿತ್ಯದ ಒಂದು ತೆರಪನ್ನು ಮುಚ್ಚಿದ್ದಾರೆ.

ಪ್ರಬಂಧಶಾಖೆಯ ಉಗಮ ಮತ್ತು ಬೆಳವಣಿಗೆ: ಪ್ರಬಂಧ ಪಂಥೀಯರು ಅಥವಾ ತೆಂಗಲೆಯವರು ಶ್ರೀರಾಮಾನುಜರಿಂದ ಮುಂದಿನ ಗುರುಪರಂಪರೆಯನ್ನು ಈ ರೀತಿ ಗುರುತಿಸುತ್ತಾರೆ. ರಾಮಾನುಜರ ಸೋದರರಾದ ಎಂಬಾರರು ರಾಮಾನುಜರಿಗಿಂತ ಮೊದಲೇ ಸ್ವರ್ಗಸ್ಥರಾದರು. ಈ ಪಂಥೀಯರು ಅವರನ್ನೆ ಪ್ರಪ್ರಥಮ ಸನ್ನಿಹಿತ ಉತ್ತರಾಧಿಕಾರಿಗಳಾಗಿ ಭಾವಿಸುತ್ತಾರೆ. ಕೂರೇಶರ ಪುತ್ರರೂ 'ಸಹಸ್ರನಾಮ ಭಾಷ್ಯ'ದ ಕರ್ತರೂ ಆದ ಪರಾಶರಭಟ್ಟರು ಎಂಬಾರರ ಶಿಷ್ಯರು. ಅದ್ವೈತದಿಂದ ಮತಾಂತರ ಹೊಂದಿ, ಎಂಬಾರರಾದ ಮೇಲೆ ಗುರುಪೀಠವನ್ನಲಂಕರಿಸಿದರು. ಅವರು ನಮ್ಮಾಳ್ವಾರರ ತಿರುವಾಯ್‌ಮೊಳಿಗೆ 'ಒಂಬದನಾಯಿರಪ್ಪಡಿ' ಎಂಬ ವಿಸ್ತಾರವಾದ ವ್ಯಾಖ್ಯಾನವನ್ನು ರಚಿಸಿ ಮಹೋಪಕಾರಮಾಡಿದ್ದಾರೆ. ನಂಜೀಯರವರ ಶಿಷ್ಯರಾದ ನಂಪಿಳ್ಳೆಯವರು ಅದ್ಭುತ ಕ್ರಿಯಾಶಕ್ತಿಯುಳ್ಳವರು. ತಮ್ಮ ಶಿಷ್ಯರಲ್ಲಿ ಸ್ಪಷ್ಟವಾದ ಪ್ರತ್ಯೇಕ ಪಂಗಡವನ್ನು ರೂಢಿಗೆ ತಂದರು. ಅವರ ಶಿಷ್ಯರಲ್ಲಿ ಒಬ್ಬರಾದ ಪೆರಿಯ ಆಚ್ಚಾನ್ ಪಿಳ್ಳೆಯವರು ತಮ್ಮ ಆಚಾರ್ಯರ ವ್ಯಾಖ್ಯಾನ ಸಾರವನ್ನು "ಇರವತ್ತನಾಲಾಯಿರಪ್ಪಡಿ" ಎಂಬ ಗ್ರಂಥದಲ್ಲಿ ಅಳವಡಿಸಿದರು. ಉದ್ದಾಮ ಪಂಡಿತರಾದ ಇವರು "ಪರಂಪರರಹಸ್ಯಮಾಲೈ," "ಮಾಣಿಕ್ಯ ಮಾಲೈ,'' "ನವರತ್ನಮಾಲೈ," "ಸಕಲ ಪ್ರಮಾಣ ತಾತ್ಪರ್ಯ,'' "ಉಪಕಾರ ರತ್ನಂ'' "ಗದ್ಯತ್ರಯವ್ಯಾಖ್ಯಾನಂ'' "ಚರಮರಹಸ್ಯಂ'' "ನಿಯಮನಪ್ಪಡಿ'' ಮೊದಲಾದ ಅನೇಕ ಕೃತಿಗಳನ್ನು ರಚಿಸಿದರು. ಇವು ತೆಂಗಲೆಯವರಲ್ಲಿ ಇಂದಿಗೂ ಬಹು ಜನಪ್ರಿಯವಾಗಿವೆ. ಇವರು ತಮ್ಮ ಪಂಥದ ತತ್ತ್ವವನ್ನು ಜನಪ್ರಿಯವಾಗಿಸುವುದಕ್ಕಾಗಿ ಮಣಿಪ್ರವಾಳಶೈಲಿಯಲ್ಲಿ ಅನೇಕ ಕೃತಿಗಳನ್ನು ರಚಿಸಿದುದಲ್ಲದೆ ಯಾಮುನಾಚಾರ್ಯರ ವೈಭವವನ್ನೂ, ಅಷ್ಟಾಕ್ಷರೀ ಮಹಿಮೆಯನ್ನೂ ಕುರಿತ ಲಘುಕೃತಿಗಳನ್ನೂ ರಚಿಸಿದ್ದಾರೆ. ಮತ್ತೊಬ್ಬ ಶಿಷ್ಯರಾದ ಪಿನ್‌ಬಳಹಿಯ ಜೀಯರ್ ಎಂಬುವರು ಆಚಾರ್ಯ ಭಕ್ತಿತತ್ತ್ವವನ್ನು ಪರಮೋತ್ತಮ ಮಟ್ಟಕ್ಕೇರಿಸಿದುದಲ್ಲದೆ ತಿರುವಾಯ್‌ಮೊಳಿಗೆ "ಪನ್ನೀರಾಯಿರಪ್ಪಡಿ'' ಎಂಬ ವ್ಯಾಖ್ಯಾನವನ್ನೂ ಮೊತ್ತಮೊದಲನೆಯದಾದ ಈ ಪಂಥದ ಆಚಾರ್ಯ ಪರಂಪರಾತ್ಮಕ ಗ್ರಂಥವೊಂದನ್ನೂ ರಚಿಸಿದರು. "ಗುರುಪರಂಪರಾ'' ಎಂಬ ಅಭಿದಾನವನ್ನು ಪಡೆದ ಈ ಕೃತಿ ಮುಂದಿನ ಇಂತಹ ಕೃತಿಗಳಿಗೆಲ್ಲಾ ಮಾದರಿಯಿತು.

ನಂಪಿಳ್ಳೆಯವರು ಸ್ವರ್ಗಸ್ಥರಾದ ಮೇಲೆ ಕೃಷ್ಣಪಾದರು (ವಡಕ್ಕುತ್ತಿರುವೀದಿ ಪಿಳ್ಳೈ) ಈ ಪಂಥದ ನಾಯಕರಾದರು. ಇವರು ನಮ್ಮಾಳ್ವಾರರ ತಿರುವಾಯ್ ಮೊಳಿಗೆ 'ಮುಪ್ಪತ್ತಾಯಿರಪ್ಪಡಿ' ಎಂಬ ಬಹು ಶ್ಲಾಘನೀಯವಾದ ವ್ಯಾಖ್ಯಾನವನ್ನು ರಚಿಸಿದರು. ಇದು ನಮ್ಮಾಳ್ವಾರರ ತಿರುವಾಯ್‌ಮೊಳಿಗೂ ಶ್ರುತಪ್ರಕಾಶಿಕೆಗೂ ಸಮನಾದುದರಿಂದ ಇದನ್ನು 'ಈಡು' ಎಂದು ಕರೆದರು. ಮುಂದೆ ವರವರಮುನಿ (ಮಣವಾಳ ಮಹಾಮುನಿ)ಗಳಿಂದ ಈ "ಈಡು'' ತೆಂಗಲೆಯವರ ಪ್ರಧಾನ ವ್ಯಾಸಂಗ ವಿಷಯವಾಗಿ ಮಾಡಲ್ಪಟ್ಟಿತು. ಕೃಷ್ಣಪಾದರ ಪುತ್ರರೂ ಅವರ ಉತ್ತರಾಧಿಕಾರಿಗಳೂ ವೇದಾಂತ ದೇಶಿಕರ ಹಿರಿಯ ಸಮಕಾಲೀನರೂ ಆದ ಸುಪ್ರಸಿದ್ಧ ಪಿಳ್ಳೈ ಲೋಕಾಚಾರ್ಯರು ತೆಂಗಲೆ ಶಾಖೆಯ ಮೂಲಸ್ಥಾಪಕರೆಂದು ಅಂಗೀಕೃತವಾಗಿದೆ. ಜ್ಞಾನ ದೃಷ್ಟಿಯಿಂದ ಬಹು ಪ್ರತಿಭಾಶಾಲಿಗಳಾದ ಇವರು ತಮ್ಮ ಪಂಥದ ಉಪದೇಶಗಳನ್ನು ಎತ್ತಿ ಹಿಡಿಯುವುದಕ್ಕಾಗಿ ಅನೇಕ ಕೃತಿಗಳನ್ನು ರಚಿಸಿದರು. ಅವರ "ಶ್ರೀವಚನಭೂಷಣ''ದಲ್ಲಿಯೂ ಅವರ ಸಹೋದರರ "ಆಚಾರ್ಯ ಹೃದಯ''ದಲ್ಲಿಯೂ ಪ್ರಪತ್ತಿ ತತ್ತ್ವದ ಎಲ್ಲ ವಿಷಯಕವಾದ ಸಾರವನ್ನೂ ಕಾಣಬಹುದು. ಸ್ತ್ರೀಯರ ಮತ್ತು ಸಾಮಾನ್ಯಜನರ

ಪ್ರಯೋಜನಕ್ಕಾಗಿ ಪಿಳ್ಳೈ ಲೋಕಾಚಾರ್ಯರು ಶ್ರೀವೈಷ್ಣವ ರಹಸ್ಯ ಮತ್ತು ತತ್ತ್ವ ವಿಷಯಗಳಾದ 'ನಿಗಮನಪ್ಪಡಿ', 'ಮುಮುಕ್ಷುಪ್ಪಡಿ', 'ತತ್ತ್ವತ್ರಯ', 'ಅರ್ಥಪಂಚಕ', 'ನವರತ್ನಮಾಲೆ' ಮೊದಲಾದ 16 ಪ್ರಬಂಧಗಳನ್ನು ರಚಿಸಿದರು. ಇವೆಲ್ಲಾ ಲಘುಕೃತಿಗಳು. ಆದರೂ ತೆಂಗಲೆಯವರಿಂದ ಇವೇ ನಿಜವಾಗಿ ನೇರವಾಗಿ ರಾಮಾನುಜ ಮತ್ತು ಆಳ್ವಾರ್‌ರವರ ಪಂಥದ ವಾಸ್ತವವಾದ ತತ್ತ್ವಪ್ರತಿಪಾದಕ ಗ್ರಂಥಗಳೆಂದು ಅಂಗೀಕೃತವಾಗಿವೆ.

ಪ್ರಬಂಧಪಂಥದ ನಾಯಕತ್ವವು ಮುಂದೆ ಶ್ರೀಶೈಲರಿಂದ ಅಂಗೀಕೃತವಾಯಿತು. ಇವರು ಆಳ್ವಾರ್ ತಿರುನಹರಿ (ತಿರುನಲ್ವೇಲಿ ಜಿಲ್ಲೆ) ಯನ್ನು ತಮ್ಮ ಪ್ರಚಾರಕ್ಷೇತ್ರವಾಗಿಸಿಕೊಂಡು ತಮ್ಮ ಕಾಲದಲ್ಲಿ ಪಂಥದ ಪರಂಪರೆಯನ್ನು ಬೆಳೆಸಿಕೊಂಡು ಬಂದರು. ಮುಂದೆ ಸುಪ್ರಸಿದ್ಧ ತೆಂಗಲೆ ಆಚಾರ್ಯರಾದ ಅಳಹಿಯ ಮಣವಾಳರನ್ನು ಸುಶಿಕ್ಷಿತರನ್ನಾಗಿ ಮಾಡಿದುದು ಇವರ ಬೃಹತ್ಕಾರ್ಯ. ತಮ್ಮ ಆಚಾರ್ಯರಾದ ಮೇಲೆ ಮಣವಾಳರೇ ಆಚಾರ್ಯ ಪೀಠವನ್ನಲಂಕರಿಸಿದರು.

ಇವರ ಕಾಲದಲ್ಲಿ ಶ್ರೀರಂಗದಲ್ಲಿ ಪ್ರಬಂಧ ಶಾಖೆಯ ಬೆಳವಣಿಗೆಗೆ ಉತ್ತಮ ವಾತಾವರಣ ಕಲ್ಪಿತವಾಗಿದ್ದಿತು. ಆದಿಕಾಲದಿಂದಲೂ ವಿಜಯನಗರದರಸರೂ ಸಾಮಂತರೂ ಅಧಿಕಾರಿಗಳೂ ಧಾರ್ಮಿಕ ಪಂಥದ ಆಚಾರ್ಯಪುರುಷರ ಮೂಲಕ ಪ್ರಸಿದ್ಧವಾದ ವಿವಿಧ ದೇವಾಲಯಗಳಲ್ಲಿ ತಮ್ಮ ಸ್ಥಾನಮಾನಗಳನ್ನು-ಹೆಚ್ಚಿಸಿ ಕೊಳ್ಳಲು ಪ್ರಯತ್ನಪಡುತ್ತಿದ್ದರು. ವೇದಾಂತ ದೇಶಿಕರನ್ನೂ ತಮ್ಮ ಆಸ್ಥಾನಕ್ಕೆ ಬರಬೇಕೆಂದವರು ಆಹ್ವಾನಿಸಿದ್ದರು. ಐಹಿಕದಲ್ಲಿ ವಿಮುಖರಾದ ಅವರು ಆ ಸಂದರ್ಭದಲ್ಲಿ 'ವೈರಾಗ್ಯ ಪಂಚಕ'ವೆಂಬ ಒಂದು ಸಣ್ಣ ಕೃತಿಯನ್ನು ರಚಿಸಿ ಅದರಲ್ಲಿ ತಾವು 'ದುರ್ವಾರಗರ್ವಾಪಿತ ಕ್ಷುಭ್ಯಕ್ಷುದ್ರ ನರೇಂದ್ರಚಾಟುರಚನಾ ಧನ್ಯಾಂ ನಮನ್ಯಾಮಹೇ। ದೇವಂ ಸೇವಿತಮೇವ ನಿಶ್ಚಿತಮಹೋ ಯೋ ಸಾ ದಯಾಳುಃ ಪುರಾ॥ ದಾನಾ ಮುಷ್ಟಿಮುಚೇ ಕುಚೇಲಮುನಯೇ ದತ್ತೇಸ್ಮ ವಿತ್ತೇಶತಾಂ॥" ಎಂದು ಅವರ ಆಹ್ವಾನವನ್ನು ತಿರಸ್ಕರಿಸಿದರು, ಅವರು ೧೩೬೯ ರಲ್ಲಿ ಪರಂಧಾಮವನ್ನೈದುವವರೆಗೆ ರಾಜರಿಗೆ ದೇವಾಲಯಗಳ ಆಡಳಿತದಲ್ಲಿ ಪ್ರವೇಶಿಸಲು ಸಾಧ್ಯವಾಗಲಿಲ್ಲ.

ಈವೇಳೆಗೆ ಪೆರಿಯಾಳ್ವಾರ್ ಅವರ ವಂಶೀಯರೆಂದು ಹೇಳಲಾದ ಪೆರಿಯ ಕೃಷ್ಣಾರ್ಯ ನಂಬಿ ಎಂಬುವರು ಶ್ರೀವಿಲ್ಲಿಪುತ್ತೂರಿನಿಂದ ಶ್ರೀರಂಗಕ್ಕೆ ಬಂದು ಅಲ್ಲೊಂದು ಮಠವನ್ನು ಸ್ಥಾಪಿಸಿ ಪ್ರಸಿದ್ಧಿಗೆ ಬರುತ್ತಿದ್ದರು. ಇವರು ಪ್ರಬಂಧ ಪಕ್ಷೀಯರು. ಇವರು ೧೩೭೦ ರಿಂದ ೧೪೧೫ ರ ವರೆಗೆ ವಿಜಯನಗರಕ್ಕೆ ಅನೇಕಸಲ ಭೇಟಿಯಿತ್ತು ರಾಜಾಶ್ರಯವನ್ನು ಪಡೆದು ಭಿನ್ನ ಭಿನ್ನ ವ್ಯಕ್ತಿಗಳಿಂದ ದೇವಾಲಯಗಳಿಗೆ ದ್ರವ್ಯರೂಪವಾಗಿಯೂ ಗ್ರಾಮಭೂಮಿಗಳ ರೂಪದಲ್ಲಿಯೂ ವಿಶೇಷ ದತ್ತಿಗಳನ್ನು ಪಡೆದುದಲ್ಲದೆ, ಅನೇಕ ಬಿರುದು ಬಾವಲಿಗಳನ್ನೂ ಪಡೆದರು. ಇವರು ರಾಜರಿಂದ ದಾನಮಾಡಲ್ಪಟ್ಟ ಎಲ್ಲ ಗ್ರಾಮಭೂಮಿಗಳ ಆಡಳಿತಗಾರರೂ ಅದರ ಫಲಗಳ ವಿತರಣೆಗಾರರೂ ಆದರು. ದೇವರಿಗೆ ವಿಶೇಷರೀತಿಯಲ್ಲಿ ಸೇವೆಗಳನ್ನು ನಡೆಸಿದರು. ಹೊಸ ದೇವಸ್ಥಾನಗಳನ್ನೂ ಮಂಟಪಗಳನ್ನೂ ಕಟ್ಟಿಸಿ ಸಮಾಜದಲ್ಲಿಯೂ ದೇವಸ್ಥಾನದಲ್ಲಿಯೂ ಪ್ರಮುಖಸ್ಥಾನವನ್ನು ಗಳಿಸಿದರು. ಇದರಿಂದ ರಾಜರುಗಳಿಗೆ ದೇವಾಲಯದಲ್ಲಿ ಪ್ರವೇಶಿಸಿ ತಮ್ಮ ಅಧಿಕಾರವನ್ನು ಚಲಾಯಿಸಲು ಸುಲಭಸಾಧ್ಯವಾಯಿತು. ನಂಬಿಯವರ ಪ್ರಯತ್ನದ ಫಲವಾಗಿ ಸುಮಾರು ೩೫ ವರ್ಷಗಳಲ್ಲಿ ದೇವಾಲಯಕ್ಕೆ ಸುಮಾರು ೨೦ ಸಾವಿರ ವರಹಗಳ ವರ್ಷಾದಾಯವುಳ್ಳ ಆಸ್ತಿಯು ದೊರಕಿತು. ಆದರಿಂದ ನಂಬಿಯವರಿಗೆ ತಮ್ಮ ಸಂಪ್ರದಾಯ ಪ್ರಚಾರವು ಬಹು ಸುಲಭವಾಯಿತು. ಸ್ಥಳೀಯರಾದ ಆಚಾರ್ಯ ಪುರುಷರಿಗೆ ದೇವಸ್ಥಾನದಲ್ಲಿ ಸಲ್ಲಬೇಕಾದ ಸ್ಥಾನಮಾನಗಳ ವಿಷಯದಲ್ಲಿ ಉಂಟಾಗುತ್ತಿದ್ದ ವ್ಯಾಜ್ಯಗಳಲ್ಲಿ ನಂಬಿಯವರು ಪ್ರವೇಶಿಸಿ ರಾಜರ ಸಹಾಯದಿಂದ ತೀರ್ಮಾನಿಸಲು ಮೊದಲು ಮಾಡಿದರು. ಇದರಿಂದ ಆಚಾರ್ಯಪುರುಷರನೇಕರು ಇವರ ದಾಕ್ಷಿಣ್ಯಕ್ಕೊಳಗಾದರು. ಮುಂದಿನ ಅರಸರುಗಳ ಕಾಲದಲ್ಲಿಯೂ ನಂಬಿಯರ ವಂಶೀಯರು ತಮ್ಮ ಪ್ರಭಾವವನ್ನು ಬೆಳೆಸಿಕೊಂಡು ಬಂದರು.

ಈ ವಾತಾವರಣದಲ್ಲಿ ಪ್ರಬಂಧಪಂಥವು ಮಣವಾಳ ಮಹಾಮುನಿಗಳ ನೇತೃತ್ತ್ವದಲ್ಲಿ ಅತ್ಯುಜ್ವಲವಾದ ಅಭಿವೃದ್ಧಿಯನ್ನು ಪಡೆಯಿತು. ಮಣವಾಳರು ೧೩೭೦ ರಲ್ಲಿ ತಿನ್ನವಲ್ಲಿ ಜಿಲ್ಲೆಗೆ ಸೇರಿದ ಆಳ್ವಾರ್ ತಿರುನಹರಿ ಎಂಬಲ್ಲಿ ಅವತರಿಸಿದರು. ಆಕಾಲದಲ್ಲಿ ಅದು ಪ್ರಬಂಧಪಂಥದ ಉಚ್ಚ ಕೇಂದ್ರವಾಗಿತ್ತು. ಬಾಲ್ಯದಲ್ಲಿ ಅವರು ಆ ಪಂಥದ ಹಿರಿಯ ಆಚಾರ್ಯರುಗಳಲ್ಲಿ ವ್ಯಾಸಂಗಮಾಡಿ ಪ್ರವೃದ್ಧಮಾನರಾಗಿ ೧೫ ನೇ ಶತಮಾನದ ಆದಿಭಾಗದಲ್ಲಿ ಶ್ರೀರಂಗಕ್ಕೆ ದಯಮಾಡಿಸಿ ಅಲ್ಲಿ ಪ್ರಸಿದ್ಧ ಆಚಾರ್ಯಪುರುಷರಾಗಿದ್ದ ಕಂದಾಡೆ ಮನೆತನದವರ ಸಹಾಯದಿಂದ ಒಂದು ಮಠವನ್ನು ಸ್ಥಾಪಿಸಿದರು. ಸ್ವಲ್ಪ ಕಾಲ ಕಾಂಚೀಪುರಕ್ಕೆ ತೆರಳಿ ಶ್ರೀಭಾಷ್ಯ ಕಾಲಕ್ಷೇಪಮಾಡಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು. ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಆಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಸುಮಾರು ೧೪೨೫ ರ ವೇಳೆಗೆ ಶ್ರೀರಂಗಕ್ಕೆ ಹಿಂತಿರುಗಿದರು. ೧೪೨೫ ರಿಂದ ೧೪೩೨ ರವರೆಗೆ ಶ್ರೀರಂಗದಲ್ಲಿ ಸಂಪ್ರದಾಯ ಪ್ರಚಾರ ಸಂಬಂಧವಾಗಿ ಅದ್ಭುತ ಕಾರ್ಯವನ್ನು ನಡೆಸಿ 'ಪೆರಿಯ ಜೀಯರ್' ಎಂಬ ಗೌರವಾಭಿದಾನವನ್ನು ಪಡೆದರು.

ಮಣವಾಳ ಮಹಾಮುನಿಗಳು ಬಹು ಮೇಧಾವಿಗಳು ಕಾರ್ಯಪಕ್ಷರು, ವ್ಯವಹಾರ ಕುಶಲರು. ತಮ್ಮ ಕಾರ್ಯಸಾಧನೆಗಾಗಿ ಅವರು ಅನುಸರಿಸಿದ ಮಾರ್ಗಗಳು ಸುಸ್ಪಷ್ಟ. ಮೊದಲು ಅವರು ಅಧ್ಯಾತ್ಮ ವಿದ್ಯೆಯಲ್ಲಿ ಪ್ರಬಂಧಗಳಿಗೆ ಪ್ರಥಮ ಸ್ಥಾನವನ್ನು ಕಲ್ಪಿಸಿದರು. ಆಚಾರ್ಯ ಪ್ರತಿಪತ್ತಿಯನ್ನು ಬಹು ಉಚ್ಚಮಟ್ಟಕ್ಕೇರಿಸಿದರು. ಪ್ರಸಿದ್ಧ ಆಚಾರ್ಯಪುರುಷರ ವಂಶಕ್ಕೆ ಸೇರಿದವರನ್ನು ತಮ್ಮ ಶಿಷ್ಯರಾಗಿಸಿಕೊಂಡರು. ಅವರಿಂದ ತಮಗೆ ವಿಶೇಷವಾದ ರಾಜಗೌರವನ್ನು ಪಡೆದುದಲ್ಲದೆ ಮಠಗಳಿಗೂ ಶಿಷ್ಯರಿಗೂ ವಿಶೇಷ ಆರ್ಥಿಕ ಸಹಾಯವನ್ನು ಪಡೆದರು. ಇವರ ಮತ್ತು ಇವರ ಶಿಷ್ಯರ ಕಾರ್ಯದಿಂದ ಶ್ರೀರಂಗಕ್ಕೆ ದಕ್ಷಿಣದಲ್ಲಿದ್ದ ತಮಿಳು ರಾಜ್ಯಗಳಲ್ಲೆಲ್ಲಾ ಪ್ರಬಂಧಪಂಥವು ತಾನೇ ತಾನಾಗಿ ಬೆಳೆಯಿತು.

ಕಂದಾಡೆವಂಶೀಯರೂ ಉತ್ತಮನಂಬಿಯ ಉತ್ತರಾಧಿಕಾರಿಗಳೂ ಸಂಸ್ಕೃತ ಪಂಥೀಯರಾಗಿದ್ದ ಪ್ರತಿವಾದಭಯಂಕರಂ ಅಣ್ಣನ್, ಎರುಂಬಿ ಅಪ್ಪರ್, ಎಂಬೆರುಮಾನಾರ್ ಜೀಯರ್, ಭಟ್ಟರ್ ಪಿರಾನ್, ಅಪ್ಪಿಳ್ಳೈ, ಅಪ್ಪುಳ್ಳಾರ್ ಇವರು ೭ ಜನಗಳೂ ಅವರ ಶಿಷ್ಯರಾದರು. ಇವರೊಡನೆ ಅವರ ಆತ್ಮೀಯ ಶಿಷ್ಯರಾಗಿದ್ದ ರಾಮಾನುಜ ಜೀಯರ್ ಎಂಬುವರನ್ನೂ ಅಷ್ಟದಿಗ್ಗಜಗಳೆಂದು ಕರೆದು ಅವರನ್ನು ತಾವೇ ಸ್ಥಾಪಿಸಿದ ಎಂಟು ಮಠಗಳಿಗೆ ಸಂಪ್ರದಾಯ ಪ್ರಚಾರಕ್ಕೆ ಅಧಿಪತಿಗಳನ್ನಾಗಿ ನೇಮಿಸಿದರು. ಅವರು ಅಣ್ಣನ್ ಅವರನ್ನು ಶ್ರೀಭಾಷ್ಯ ಮತ್ತು ಭಗವದ್ವಿಷಯವಾಗಿ ಉಪನ್ಯಸಿಸಲು ನೇಮಕಮಾಡಿದರು. ರಾಮಾನುಜಜೀಯರನ್ನು ಪ್ರಚಾರಮಾಡುವ ಕಾರ್ಯಕ್ಕೆ ನೇಮಿಸಿದರು. ಎರುಂಬಿ ಅಪ್ಪರ್ ಅವರು ಆಚಾರ್ಯರ ಜನ್ಮಸ್ಥಳದ ಪರಿಸರದಲ್ಲಿ ಕಾರ್ಯನಿರತರಾದರು. ಅಪ್ಪಿಳ್ಳೈ ಮತ್ತು ಅಪ್ಪುಳ್ಳಾರ್ ಸರ್ವವ್ಯಾಪಿಯಾಗಿ ಕೆಲಸಮಾಡಿದರು.

ಇವೆಲ್ಲಕ್ಕಿಂತಲೂ ಮಣವಾಳರ ವೈಯಕ್ತಿಕ ಕಾರ್ಯವು ಬಹು ಶ್ಲಾಘ್ಯವಾದುದು. ತಾವೇ ದೇಶದಲ್ಲೆಲ್ಲಾ ಪ್ರತ್ಯಕ್ಷವಾಗಿ ಸಂಚರಿಸಿ ತಮ್ಮ ವಾಗ್ಝರಿಂದಲೂ, ಉಪದೇಶದಿಂದಲೂ ಅನೇಕ ರಾಜಕೀಯ ವ್ಯಕ್ತಿಗಳನ್ನು ತಮ್ಮ ಶಿಷ್ಯರನ್ನಾಗಿಸಿಕೊಂಡು ಅವರಿಂದ ವಿವಿಧ ರೀತಿಯಲ್ಲಿ ಸಹಾಯವನ್ನು ಪಡೆದರು. ಸ್ಥಳೀಯ ರಾಜಕುಮಾರನೊಬ್ಬನನ್ನು ಶಿಷ್ಯವೃಂದದಲ್ಲಿ ಸೇರಿಸಿ ಅವನಿಗೆ ಶಠಗೋಪದಾಸ ಎಂಬ ಹೊಸ ಹೆಸರನ್ನಿಟ್ಟು, ಆತನಿಂದ ಶ್ರೀರಂಗದಲ್ಲಿ ಅನೇಕ ಮಂಟಪಗಳನ್ನು ದೇವಾಲಯಗಳನ್ನು ನಿರ್ಮಿಸಿದರು. ಕೆಲವು ತುಳು ಸಾಮಂತರು ಇವರ ಶಿಷ್ಯರಾಗಿ ಅವರಿಂದ ಪಂಚಸಂಸ್ಕಾರವನ್ನು ಪಡೆದರು. ಮಹಾಬಲಿವನ ದೇವರಾಜನೆಂಬುವನು ಇವರ ಶಿಷ್ಯನಾಗಿ ಅನೇಕ ರಾಜಮರ್ಯಾದೆಗಳನ್ನಿತ್ತಿದ್ದಲ್ಲದೆ ಅವರ ಪಲ್ಲಕಿಯನ್ನು ತಾನೇ ಹೊತ್ತು ಗೌರವಿಸಿದನು. ಅವರು ಕ್ಷೇತ್ರಯಾತ್ರೆಯಿಂದ ಹಿಂದಿರುಗಿದ ಕಾಲದಲ್ಲಿ ಅವರು ದೇವರಿಗಾಗಿ ಸಂಗ್ರಹಿಸಿ ತಂದ ಧನ, ಕನಕ, ರತ್ನ, ಮುತ್ತು, ಛತ್ರಿ, ಚಾಮರ ಧ್ವಜ, ರೇಷ್ಮೆವಸ್ತ್ರ ಮೊದಲಾದವುಗಳ ಪ್ರಮಾಣವು 'ಯತೀಂದ್ರ ಪ್ರವಣ ವೈಭವ' ಎಂಬ ಗ್ರಂಥದಲ್ಲಿ ಬಹು ವೈಭವದಿಂದ ವರ್ಣಿತವಾಗಿದೆ.

ಮಣವಾಳರು ಶ್ರೀವೈಷ್ಣವರ್ಗದ ಗ್ರಂಥಕಾರರೂ ಹೌದು. ಅವುಗಳ ಸಂಖ್ಯೆಯು ವಿಶೇಷವಲ್ಲದಿದ್ದರೂ ಬಹು ಪ್ರಭಾವಶಾಲಿಯಾಗಿದೆ. ಅವೆಲ್ಲಾ ಆ ಪಂಥದ ಪೂರ್ವಾಚಾರ್ಯರ ಗ್ರಂಥದ ವ್ಯಾಖ್ಯಾನ ರೂಪದಲ್ಲಿದೆ. ಅವುಗಳಲ್ಲಿ ಪಿಳ್ಳೈಲೋಕಾಚಾರ್ಯರ 'ಶ್ರೀ ವಚನ ಭೂಷಣ'ದ ವ್ಯಾಖ್ಯಾನವು ಪರಮೋತ್ತ್ರಮವಾಗಿದೆ. ಇದರಲ್ಲಿಯೂ, ಅವರು ೧೪೩೦ ರಿಂದ ೧೪೪೪ ರ ವರೆಗೆ ಏಕ ಪ್ರಕಾರ ವರ್ಷದುದ್ದಕ್ಕೂ ಅನುಗ್ರಹಿಸಿದ ಉಪನ್ಯಾಸ ಮಾಲೆಗಳಲ್ಲಿಯೂ ತೆಂಗಲೆಪಂಥದ ರೀತಿಯ ಪ್ರಪತ್ತ್ಯರ್ಥವನ್ನು ಸ್ಥಿರಗೊಳಿಸಿ ಆಚಾರ್ಯ ಪ್ರತಿಪತ್ತಿಗೆ ಅಗ್ರಸ್ಥಾನವನ್ನೂ ದೊರಕಿಸಿದ್ದಾರೆ. 'ಈಡು ಮುಪ್ಪತ್ತಾಯಿರಪ್ಪಡಿ' ಯನ್ನು ಪಂಥದ ಪ್ರಧಾನ ಆಧಾರ ಗ್ರಂಥವಾಗಿ ಸ್ಥಿರೀಕರಿಸಿದ್ದಾರೆ. ರಾಮಾನುಜರ ಸ್ತುತಿ ರೂಪವಾದ 'ರಾಮಾನುಜವಿಂಶತಿ' ಎಂಬ ಸ್ತೋತ್ರವನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ನಮ್ಮಾಳ್ವಾರರ ತಿರುವಾಯ್‌ಮೊಳಿಯ ವಿಷಯಕವಾದ ದ್ರವಿಡೋಪನಿಷತ್ ಸಂಗತಿಯೂ, ನಿತ್ಯಾಚಾರ ವಿಷಯಕವಾದ ಗ್ರಂಥವೊಂದೂ ಅವರಿಂದ ರಚಿತವಾಗಿವೆ. ಇವೆಲ್ಲಾ ಮಣವಾಳ ಮಹಾಮುನಿಗಳಿಗೆ ಸಂಪ್ರದಾಯ ಗ್ರಂಥಗಳಲ್ಲಿ ಉಚ್ಚಸ್ಥಾನವನ್ನು ಕಲ್ಪಿಸಿವೆ. ಅವರ ಅವತಾರಾಂತ್ಯದ ವೇಳೆಗೆ ತಮಿಳು ದೇಶದ ದಕ್ಷಿಣದ ಬಹುಭಾಗವು ದ್ರಾವಿಡ ಸಂಪ್ರದಾಯದ ಪ್ರಭಾವಕ್ಕೆ ಒಳಗಾಯಿತು.

ಮಣವಾಳರ ಉಪದೇಶವು ಅವರ ಶಿಷ್ಯರ ಮೇಲೆ ಮತ್ತು ಪಂಥಕ್ಕೆ ಒಂದು ಸ್ಪಷ್ಟ ರೂಪವನ್ನು ಕೊಟ್ಟಿತು. ಅವರ ಅದ್ಭುತವಾದ ವ್ಯಕ್ತಿತ್ವವು ಅವರ ಶಿಷ್ಯರ ಮನಸ್ಸಿನಲ್ಲಿ ಅವರು ರಾಮಾನುಜರ ಅವತಾರ ರೂಪವೇ ಎಂಬ ಕಲ್ಪನಾ ಸ್ಥಾನಕ್ಕೆ ಏರುವಂತೆ ಮಾಡಿತು. ಅವರು ನೇಮಕ ಮಾಡಿದ ಅಷ್ಟು ಮಠಗಳೂ ಅದರ ಅಧಿಕಾರಿಗಳಾದ ಅಷ್ಟದಿಗ್ಗಜರೂ ಪಂಥದ ಭವಿಷ್ಯಕ್ಕೆ ತಳಹದಿಯಾದರು. ಅಷ್ಟದಿಗ್ಗಜರು ಅಲ್ಪಕಾಲದಲ್ಲಿ ಆ ಪಂಥವನ್ನು ದೇಶದಲ್ಲೆಲ್ಲಾ ಅಭಿವೃದ್ಧಿಗೆ ತಂದರು. ಅವರ ಉತ್ತರಾಧಿಕಾರಿಗಳು ಈ ಕಾರ್ಯವನ್ನು ಬಹು ದಕ್ಷತೆಯಿಂದ ನಡೆಸಿಕೊಂಡು ಬಂದಿದ್ದಾರೆ. ವಾನಮಾಮಲೈ, ತಿರುಪತಿ ಮತ್ತು ಇತರ ಕಡೆಗಳಲ್ಲಿರುವ ಇವರ ಸುಪ್ರಸಿದ್ಧ ಮಠಗಳು ಅನೇಕ ಪಂಡಿತ ಪ್ರಕಾಂಡರನ್ನು ಸಿದ್ಧಪಡಿಸಿವೆ. ಅವರು ವರವರಮುನಿಗಳ ಪಂಥವು ರಾಜಾಸ್ಥಾನಗಳಲ್ಲಿಯೂ ಸಾಮಾನ್ಯರ ಹೃದಯದಲ್ಲಿಯೂ ಬಹು ಜನಪ್ರಿಯವಾಗುವಂತೆ ಮಾಡಿದ್ದಾರೆ. ವರವರಮುನಿಗಳಿಂದ ಮುಂದಿನ ಶತಮಾನಗಳಲ್ಲಿ ಈ ಪಂಥವು ದಕ್ಷಿಣ ದೇಶದ ಅನೇಕ ದೇವಾಲಯಗಳನ್ನೂ ತಮ್ಮ ಅಧೀನವಾಗಿಸಿವೆ. ಪಂಥದ ಪ್ರಚಾರವೆಲ್ಲವೂ ದೇಶಭಾಷೆಯಲ್ಲೇ ನಡೆಯುತ್ತಿದ್ದುದರಿಂದ ಆ ಅನುಯಾಯಿಗಳ ಸಂಖ್ಯೆ ವಡಗಲೆಯವರದಕ್ಕಿಂತ ಹೆಚ್ಚಾಗಿದೆ. ದೇವಸ್ಥಾನಗಳಲ್ಲಿ ಈ ಪಕ್ಷದ ಆಚಾರ್ಯರ ವಿಷಯಕವಾದ ಉತ್ಸವಾದಿಗಳು ಹೆಚ್ಚು ವಿಜೃಂಭಣೆಯಿಂದ ನಡೆಯುತ್ತಿದೆ. ಅನೇಕ ಬ್ರಾಹ್ಮಣೇತರರು ಈ ಪಂಥದವರನ್ನು ಆಶ್ರಯಿಸಿ ದೇವಾಲಯಗಳಿಗೂ ಮಠಗಳಿಗೂ ಕೊಡುಗೈಗಳಿಂದ ದಾನ ಮಾಡಿದ್ದಾರೆ. ★

---

## ಕರ್ನಾಟಕದಲ್ಲಿ......

### ಕರ್ನಾಟಕ ಪ್ರಾಂತೀಯ ಹಿಂದೂ ಸಮ್ಮೇಳನ

ಕರ್ನಾಟಕದ ಶ್ರೀಕ್ಷೇತ್ರ ಧರ್ಮಸ್ಥಳದ ಬಳಿಯ ಉಜಿರೆಯಲ್ಲಿ ಡಿಸೆಂಬರ್ 1983 ರ 9, 10, 11 ದಿನಗಳಲ್ಲಿ ಮೂರುದಿನಗಳ ಕಾಲ ಕರ್ನಾಟಕ ಪ್ರಾಂತ್ಯದ ಹಿಂದೂ ಸಮ್ಮೇಳನ ಯಶಸ್ವಿಯಾಗಿ ನಡೆದು ಅಸ್ಪೃಶ್ಯತಾನಿವಾರಣೆಯು, ಸರ್ವಸಮಾನತೆಯು, ಹಿಂದೂಗಳ ಸರ್ವತೋಮುಖ ಏಳಿಗೆಗಳಗಾಗಿ ಪ್ರಚಂಡ ಓಂಕಾರಗಳ ನಡುವೆ ಸರ್ವಾನುಮತದಿಂದ ತೀರ್ಮಾನಿಸಲಾಯಿತು.

ಮಮ ದೀಕ್ಷಾ ಹಿಂದು ರಕ್ಷಾ ( ನನ್ನ ದೀಕ್ಷೆ ಹಿಂದುತ್ತ್ವದ ರಕ್ಷಣೆ ) ಮಮ ಮಂತ್ರಃ ಸಮಾನತಾ ( ನನ್ನ ಮಂತ್ರ ಸಮಾನತೆ ) ಎನ್ನುವ ಪ್ರತಿಜ್ಞಾ ವಿಧಿಯನ್ನು ಸ್ವೀಕರಿಸಿದ ಸಮ್ಮೇಳನದ ಎಪ್ಪತ್ತು ಸಾವಿರಕ್ಕೂ ಮಿಕ್ಕಿದ ಪ್ರತಿನಿಧಿಗಳು, ಒಂದು ನೂರು ಅರವತ್ತೊಂಬತ್ತು ವಿವಿಧ ಮಠಗಳ ಪೀಠಾಧಿಪತಿಗಳಿಂದ ಕೂಡಿದ ಸಮ್ಮೇಳನದಲ್ಲಿ ಹಿಂದೂ ಸಮಾಜದ ಜಾತಿವಾರು, ಭಾಷಾವಾರು, ಗುಂಪುವಾರು, ಭಿನ್ನಾಭಿಪ್ರಾಯಗಳಿಗೆ ಇನ್ನು ಮುಂದೆ ತಾವು ಮಾಡಿಕೊಡದೆ ಒಟ್ಟು ಹಿಂದೂ ಸಂಘಟನೆಯನ್ನೇ ಪರಮ ಧ್ಯೇಯವನ್ನಾಗಿ ಹೊಂದಿ ತನ್ಮೂಲಕ ಭರತ ಮಾತೆಯ ವಿಶ್ವತೋಮುಖ ಶ್ರೇಯಸ್ಸಿಗೆ ಕಾರಕರಾಗಲು ನಿರ್ಧರಿಸಿದರು.

ಉಜಿರೆಯ ಧರ್ಮಸ್ಥಳ ಮಂಜನಾಥೇಶ್ವರ ಕಾಲೇಜಿನ ಸನಿಹದ ಬೆಟ್ಟದ ಮೈದಾನದಲ್ಲಿ ಒಂದೊಂದೂ ಸುಮಾರು 3500 ಮಂದಿಗೆ ಊಟ, ವಸತಿ, ನೀರು, ಗಳಿಂದ ಸುಸಜ್ಜಿತವಾದ ಕಾವೇರಿ, ತುಂಗಾ, ಕೃಷ್ಣಾ ಮಲಪ್ರಭಾ ಮೊದಲಾದ ಹೆಸರುಗಳಿಂದ ಕೂಡಿದ 18 ಉಪನಗರಗಳು ಸಮ್ಮೇಳನಕ್ಕಾಗಿ ತಾತ್ಕಾಲಿಕವಾಗಿ ತಯಾರಾಗಿದ್ದಿತು. ಸುಮಾರು 60,000 ಕ್ಕೂ ಹೆಚ್ಚು ಮಂದಿ ಒಮ್ಮೆಲೇ ಕುಳಿತು ಕೊಳ್ಳಲು ಅನುಕೂಲವಾಗುವಂತೆ ಇದ್ದ ಸಭಾಮಂಟಪ ಹಿಂದೂ ಮಹಾಸಾಗರ' ಎಲ್ಲ ನದಿಗಳಿಂದ ಬಂದ ಹಿಂದು ಬಂಧುಗಳನ್ನು ಒಳಗೊಳ್ಳುವ ಮಹಾಸಾಗರವೇ ಆಗಿದ್ದಿತು. ಅಲ್ಲಿನ ಧರ್ಮವೇದಿಕೆ 7 ಅಡಿ ಎತ್ತರ 40 ಅಡಿ ಅಗಲ, ಹಾಗೂ 120 ಅಡಿ ಉದ್ದ. ಸಮ್ಮೇಳನದ ಆಗುಹೋಗುಗಳ ವ್ಯವಸ್ಥೆಗಾಗಿ 500 ಮಂದಿ ಮಹಿಳೆಯರೂ ಸೇರಿದಂತೆ 3500

(ಮುಂದಿನ ಪುಟಕ್ಕೆ)



ದಾಸ ಹೃದಯ ದರ್ಶನದ ಉದ್ಘಾಟನಾ ಸಮಾರಂಭ. ಮಾತನಾಡುತ್ತಿರುವವರು ಸತ್ಯಜ್ಯೋತಿ ವಾರ ಪತ್ರಿಕೆಯ ಸಂಪಾದಕ ಶ್ರೀ ಕೆ. ವಿ. ಶ್ರೀನಿವಾಸರಾವ್.

### ಚಿತ್ರದುರ್ಗದಲ್ಲಿ

## ದಾಸ ಹೃದಯ ದರ್ಶನ

ಚಿತ್ರದುರ್ಗದ ವಾಸವೀ ಮಹಲಿನಲ್ಲಿ ಈಚೆಗೆ ತಿರುಮಲೆ ತಿರುಪತಿ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್ ಸ್ಥಳೀಯ ಸತ್ಯಜ್ಯೋತಿ ಬಳಗ ಹಾಗೂ ಶ್ರೀಸ್ವಾಮಿ ಭಕ್ತ ಮಂಡಳಿಯವರ ನೆರವಿನಿಂದ ಬಹುಜನರಂಜಿತವಾಗುವ ಹಾಗೆ ದಾಸ ಹೃದಯದರ್ಶನ ಪ್ರದರ್ಶನವನ್ನು ಏರ್ಪಡಿಸಿ ಚಿತ್ರದುರ್ಗದ ಜನರ ಮೆಚ್ಚುಗೆಗೆ ಪಾತ್ರವಾಯಿತು.

18–11–83 ರಂದು ಬಾಳಗಾರು ಶ್ರೀ ಆರ್ಯ ಅಕ್ಷೋಭ್ಯ ತೀರ್ಥ ಮೂಲ ಸಂಸ್ಥಾನದ ಶ್ರೀ ಶ್ರೀ ರಘೋತ್ತಮ ತೀರ್ಥರ ನೇತೃತ್ತ್ವದಲ್ಲಿ ಶಾಸಕ ಶ್ರೀ ಅಶ್ವತ್ಥ ರೆಡ್ಡಿ ಅಧ್ಯಕ್ಷತೆಯಲ್ಲಿ ಕರ್ನಾಟಕದ ವ್ಯವಸಾಯ ಇಲಾಖಾ ಸಚಿವ ಶ್ರೀ ಬಿ. ಎಲ್. ಗೌಡರಿಂದ ಉದ್ಘಾಟಿತವಾದ ಈ ವಸ್ತುಪ್ರದರ್ಶನ ಮೂರುದಿನಗಳ ಕಾಲವೂ ಲಕ್ಷಾಂತರ ಮಂದಿಯನ್ನು ಆಕರ್ಷಿಸಿ ಭಕ್ತಿಯನ್ನು ಭದ್ರಪಡಿಸಿ ಹರಿದಾಸರ ಬಗ್ಗೆ, ಹರಿದಾಸ ಸಾಹಿತ್ಯದ ಬಗ್ಗೆ ಜನರ ಅರಿವಿನ ದಿಗಂತಗಳನ್ನು ಹಿರಿದುಗೊಳಿಸಿತೆಂದು ಸ್ಥಳೀಯರ ಅನ್ನಿಸಿಕೆ.

'ಸಮರ್ಪಣಾಭಾವದಿಂದ ಈ ಜ್ಞಾನದಾನದ ಕಾರ್ಯದಲ್ಲಿ ಭಾಗವಹಿಸಿದ ತಿರುಮಲೆ – ತಿರುಪತಿ ದೇವಸ್ಥಾನಗಳ ಅಧಿಕಾರಿವರ್ಗ ಹಾಗೂ ಕಾರ್ಯಕರ್ತರು ಅಭಿನಂದನೆಗೆ ಪಾತ್ರರು' ಎಂದು ಮಾತನಾಡುತ್ತ ಮಂತ್ರಿಗಳು 'ತಿರುಪತಿ ತಿಮ್ಮಪ್ಪನೇ ಇಲ್ಲಿಗೆ ನಡೆದು ಬಂದಂತಾಗಿದೆ ಕರೆದಲ್ಲಿಗೆ ಬರುವ ಕರುಣಾಮಯಿ ಆ ದೇವರು ಕರ್ನಾಟಕಕ್ಕೆ ಸುಭಿಕ್ಷೆಯನ್ನುಂಟು ಮಾಡಲಿ' ಎಂದು ಹಾರೈಸಿದರು.

'ಇದ್ದವರಿಂದ ವಸೂಲಿ ಮಾಡುವ ತಿರುಪತಿ ತಿಮ್ಮಪ್ಪ ಅದನ್ನು ಇಲ್ಲದವರಿಗೆ ಹಂಚುವ ಕೆಲಸ ಮಾಡುತ್ತ ಅತಿಹಿರಿಯ ಸೋಷಲಿಸ್ಟ್ ಆಗಿದ್ದಾನೆ' ಎಂದು ನುಡಿದ ಅಧ್ಯಕ್ಷ ಶ್ರೀ ಅಶ್ವತ್ಥ ರೆಡ್ಡಿ ಯವರು ಈ ಜ್ಞಾನಪ್ರಸಾರಕಾರ್ಯ ಶ್ಲಾಘ್ಯವೆಂದರು.

( ಮುಂದಿನ ಪುಟಕ್ಕೆ )



ದಾಸ ಹೃದಯ ದರ್ಶನವನ್ನು ನೋಡುತ್ತ ನಿಂತಿರುವ ಜಗದ್ಗುರು ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘ ರಾಜೇಂದ್ರ ಮಹಾಸ್ವಾಮಿಗಳು.

ಹತ್ತೊಂಬತ್ತನೇ ದಿನಾಂಕ ಡಾ॥ ಕೆ. ಎಂ. ಕೃಷ್ಣರಾವ್, ಶ್ರೀ ಮಾನಕರಿ ಹುಲಿಕುಂಟಾಚಾರ್ಯ ಮೊದಲಾದವರು ಹರಿದಾಸ ಸಾಹಿತ್ಯದ ಹಿರಿಮೆಯ ಬಗ್ಗೆ ಮಾತನಾಡಿದರು. 20 ರಂದು ಸಂಜೆ ಚಿತ್ರದುರ್ಗದ ನಗರಸಭಾಧ್ಯಕ್ಷೆ ಶ್ರೀ ಎಸ್. ಟಿ. ವಾಸುದೇವರೆಡ್ಡಿ ಅವರು ಅತಿಥಿಗಳಾಗಿ ಚಿತ್ರದುರ್ಗದ ಜಿಲ್ಲಾಧಿಕಾರಿ ಶ್ರೀ ಕೆ. ಎಂ. ಕೋಟಿ ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ನಡೆಯಿತು. ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯ ಅವರು ಉಪನ್ಯಾಸ ಮಾಡಿದರು.

ಹಲವಾರು ಭಜನಾ ಮಂಡಳಿಗಳೊಂದಿಗೆ ಶ್ರೀನಿವಾಸ ದೇವರ ಮೆರವಣಿಗೆಯನ್ನೂ ಊರಿನ ಪ್ರಮುಖ ಬೀದಿಗಳಲ್ಲಿ ಕೊಂಡೊಯ್ಯಲಾಯಿತು. ಬೀದಿಬೀದಿಗಳಲ್ಲೂ ಸಹಸ್ರಾರು ಮಂದಿ ಭಕ್ತಿಯಿಂದ ನಮಿಸುತ್ತ, ಮೆರವಣಿಗೆಯೊಡನೆ ನಡೆಯುತ್ತ, ಗೋವಿಂದ ನಾಮಸ್ಮರಣೆ ಮಾಡುತ್ತಿದ್ದುದು ನಿಜಕ್ಕೂ ಆನಂದದಾಯಿಯಾಗಿದ್ದಿತು.

---

(ಹಿಂದಿನ ಪುಟದಿಂದ)

ಮಂದಿ ಕಾರ್ಯಕರ್ತರು, 16 ಕ್ಯಾಂಟೀನುಗಳು, 16 ಸ್ಟಾಲ್‌ಗಳು, ವಿಶೇಷ ಬ್ಯಾಂಕ್ ಕೌಂಟರ್, ಅಂಚೆಕಛೇರಿ, ಟೆಲಿಫೋನ್ ಕಛೇರಿ, ನೀರಿಗಾಗಿ 13 ಕೊಳವೆಬಾವಿಗಳು,–ಎಲ್ಲವೂ ಆಧುನಿಕ ನಗರ ವ್ಯವಸ್ಥೆಯಂತೆಯೇ, ಅಥವಾ ಒಲಂಪಿಕ್ ನಗರದಂತೆ (ಮಾತ್ರ ಅವುಗಳ ಕೊರತೆಗಳು ಇಲ್ಲಿರಲಿಲ್ಲ)

ಸಮ್ಮೇಳನದ ಉದ್ಘಾಟನೆ ಮಾಡಿದ್ದು ರಾಜಾ ಭಗವತ ಸಿಂಹಜೀ ಅವರು. ಮೂರುಸಾವಿರ ಮಠಾಧೀಶರು, ಚಾರುಕೀರ್ತಿ ಭಟ್ಟಾರಕ ಶ್ರೀಗಳು, ಆದಿಚುಂಚನಗಿರಿ ಸ್ವಾಮಿಗಳು, ಸಿದ್ಧಗಂಗಾ ಮಠಾಧೀಶರು, ಪೇಜಾವರ ಮಠಾಧೀಶರು ಮೊದಲಾದವರೆಲ್ಲ ಆಶೀರ್ವಚನ ನೀಡಿದರು.

ಸಮ್ಮೇಳನದ ಒಂದು ಮುಖ್ಯ ಆಕರ್ಷಣೆಯೆಂದರೆ ಕಾಲೇಜಿನ ಪಕ್ಕದಲ್ಲಿ 'ಓಂ' ಆಕಾರದಲ್ಲಿ ನಿರ್ಮಿತವಾಗಿದ್ದ ಹಿಂದೂ–ಅಂದು–ಇಂದು–ಮುಂದು–ಪ್ರದರ್ಶಿನಿ. ಹಿಂದೂ ದೇಶದ–ಧರ್ಮದ ಇತಿಹಾಸವನ್ನು ವಿವರಿಸುವ ಅಂದು, ಅನ್ಯೋನ್ಯ ಸಂಘಟನೆಯ ಪ್ರಯತ್ನದ ಇಂದು, ಹೊಸ ಜೀವನದ ಹೊಸ ಹಾಡಿನ ಮುಂದುಗಳ ಈ ಪ್ರದರ್ಶನವನ್ನು ಒಮ್ಮೆ ನೋಡಲು ಕನಿಷ್ಟಪಕ್ಷ 100 ನಿಮಿಷಗಳಾದರೂ ಬೇಕಾಗುತ್ತಿತ್ತು. ಮೂರು ದಿನವೂ ಸುಮಾರು ಎರಡು ಲಕ್ಷಕ್ಕೂ ಹೆಚ್ಚು ಜನ ಇದನ್ನು ನೋಡಿ ಉತ್ಸಾಹಿತರಾಗಿದ್ದಿರಬೇಕು. ಪ್ರದರ್ಶನದ ಉದ್ಘಾಟನೆ ಮಾಡಿದವರು ಕನ್ನಡದ ವಿಶ್ವಮಾನವ ಕೋಟಿ ಶಿವರಾಮಕಾರಂತರು. ಅವರೆಂದದ್ದು 'ಹಿಂದು ಸಮಾಜ ಸಂಘಟಿತವಾಗಿ ಸೌಶಿಲ್ಯವನ್ನು ಬೆಳೆಸಿಕೊಳ್ಳಬೇಕು. ಅದು ಇಂದಿನ ತುರ್ತು ಅಗತ್ಯ'.

ಸಮ್ಮೇಳನದ ಸ್ಮರಣ ಸಂಚಿಕೆ 400 ಪುಟಗಳ ಅತ್ಯುತ್ತಮ ಸಾಹಿತ್ಯದ 'ಮೃತ್ಯುಂಜಯ'ವನ್ನು ಬಿಡುಗಡೆ ಮಾಡಿದ ಸಾಹಿತಿ ಸಿದ್ಧಯ ಪುರಾಣಿಕ (ಕಾವ್ಯಾನಂದ) ಅವರು ಹಿಂದೂ ಜನಾಂಗದ ಜಾಗೃತಿಯಲ್ಲಿ ಮಠಾಧಿಪತಿಗಳ ಕ್ರಿಯಾಶೀಲ ಪಾತ್ರಕ್ಕೆ ಮನವಿ ಮಾಡಿದರು.

ಸಮ್ಮೇಳನಕ್ಕೆ ಅಖಿಲ ಭಾರತ ಸ್ಥಾಯಿಯಲ್ಲಿ ನಡೆದಿರುವ ಏಕಾತ್ಮತಾಯಜ್ಞದ ಮಹಾದೇವ ರಥವೂ ಆಗಮಿಸಿದ್ದು, ಅದು ಮತ್ತೊಂದು ಪ್ರಧಾನವಾದ ಘಟ್ಟವಾಗಿದ್ದಿತು. ಪವಿತ್ರ ಗಂಗಾಜಲವನ್ನು ಸ್ವೀಕರಿಸಿದ ಸಮ್ಮೇಳನದ ಪ್ರತಿನಿಧಿಗಳು ಭಾರತ ಮಾತೆಯ ದರ್ಶನವನ್ನೂ ಪಡೆದರು. ಈ ಮಹಾದೇವರಥದ ಸ್ವಾಗತದಲ್ಲಿ ಸ್ವಾಮಿ ಚಿನ್ಮಯಾನಂದ ಜೀಯವರು ಮಾತನಾಡಿ 'ಹಿಂದೂಗಳ ಏಕತೆಯು ಒಂದು ದಿನದ ಆದರ್ಶವಾಗದೆ ದಿನನಿತ್ಯದ ಉಸಿರಾಗಬೇಕು' ಎಂದು ಕರೆ ನೀಡಿದರು. ಶ್ರೀ ಸರಸಂಘಚಾಲಕ ಶ್ರೀ ಬಾಳಾಸಾಹೇಬ ದೇವರಸರು ಮಾತನಾಡುತ್ತ 'ಮಾತೆಯಬಗೆಗಿನ ಈ ಭಕ್ತಿಯನ್ನು ರಚನಾತ್ಮಕಗೊಳಿಸಿ, ಹಿಂದು ಸಮಾಜದ ಏಳಿಗೆಗಾಗಿ ಪ್ರವೃತ್ತರಾಗೋಣ'ವೆಂದರು. ಕೊನೆಯದಿನ ಬೆಳಗ್ಗೆ ಬಸವಕಲ್ಯಾಣದಿಂದ ಆಗಮಿಸಿದ ಬಸವಜ್ಯೋತಿಯನ್ನು ಸುಬ್ರಹ್ಮಣ್ಯ ಮಠಾಧೀಶರು ಸ್ವಾಗತಿಸುತ್ತ ಉದಾರ ದೃಷ್ಟಿ, ಬೆಳೆಸಿಕೊಂಡ ನಿರ್ಣಯಗಳನ್ನು ಜಾರಿಗೊಳಿಸುವ ಸಂಕಲ್ಪ ಮಾಡಲು ಕರೆ ನೀಡಿದರು.

ಈ ಮಹಾಸಮ್ಮೇಳನದಲ್ಲಿ ವಕೀಲರು, ವೈದ್ಯರು, ಶಿಕ್ಷಕರು, ಅರ್ಚಕರು, ಶಾಸಕರು, ಪತ್ರಕರ್ತರು, ಉದ್ಯೋಗಪತಿಗಳು, ಭಜನಾ ಮಂಡಲಿಗಳು, ಕೀರ್ತನಕಾರರು, ಮಹಿಳೆಯರು ಇತ್ಯಾದಿ – ಪ್ರತ್ಯೇಕ ಸಮ್ಮೇಳನಗಳು ನಡೆದವು.

ಸಮ್ಮೇಳನದ ಸಮಾರೋಪದ ನಂತರ ಪ್ರತಿನಿಧಿಗಳನ್ನು ಬೀಳ್ಕೊಡುತ್ತ 'ನಮ್ಮ ದೀಕ್ಷೆಗೆ ಅನುಗುಣವಾದ ಹಲವು ನಿರ್ಣಯಗಳನ್ನು ನಾವು ಇಲ್ಲಿ ಮಾಡಿದ್ದೇವೆ. ನಾವೆಲ್ಲ ಸಾಮೂಹಿಕವಾಗಿ ತೊಟ್ಟಿರುವ ದೀಕ್ಷೆಯನ್ನು ಗಂಭೀರವಾಗಿ ದೃಢವಾಗಿ ಪಾಲಿಸೋಣ ಮತ್ತು ಅತಿ ಬೇಗನೆ ನಮ್ಮ ಗುರಿಯನ್ನು ಮುಟ್ಟೋಣ' ಎಂದು ಹೇಳಿ ಹೃದಯಸ್ಪರ್ಶಿ ಭಾವದಿಂದ ಕರೆಕೊಟ್ಟರು ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರಹೆಗ್ಗಡೆ.

## ಗೀತಾ ಜಯಂತಿ

ಕೋಲಾರದಲ್ಲಿ ವಿಶ್ವಹಿಂದೂ ಪರಿಷತ್ ಆಶ್ರಯದಲ್ಲಿ ಗೀತಾಜಯಂತಿ ಉತ್ಸವಗಳು ಯಶಸ್ವಿಯಾಗಿ ನಡೆದವು. ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರು ಉದ್ಘಾಟನೆ ಮಾಡಿದ ಗೀತಾಜಯಂತಿಯಲ್ಲಿ ಅನೇಕ ವಿದ್ವಾಂಸರು ಉಪನ್ಯಾಸಗಳನ್ನು ನೀಡಿ ಗೀತಾಜಯಂತಿಯ ಜ್ಞಾನದಾನದ ಕಾರ್ಯವನ್ನು ಸುಗಮಗೊಳಿಸಿದರು.

ಕೃಷ್ಣ ಅರ್ಜುನನಿಗೆ ಬೋಧಿಸಿದ ಗೀತೆಯ ಜ್ಞಾನದಿಂದ ಜೀವನ ಪರಿಷ್ಕೃತಗೊಂಡು ಸತ್ಯಧರ್ಮಗಳಿಗೆ ಪಟ್ಟಾಭಿಷೇಕವಾಗಬೇಕಿದೆ, ಅದಕ್ಕಾಗಿ ನಾವೆಲ್ಲ ಭಗೀರಥ ಪ್ರಯತ್ನ ಪಡಬೇಕು. ಧರ್ಮ ಗಂಗೆಯನ್ನು ಹರಿಸಿ ಮುಂದಿನ ಪೀಳಿಗೆಯನ್ನು ಉಳಿಸಿಕೊಳ್ಳಬೇಕಾಗಿದೆ – ಎಂದು ಸ್ವಾಮಿಗಳು ನುಡಿದರು.

## ಮಾನವ ಮನದ ಉನ್ನತಿಗಾಗಿ ಗೀತೆ - ಸ್ವಾಮಿ ರಂಗನಾಥಾನಂದ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದ ಸಭೆಯಲ್ಲಿ ಮಾತನಾಡುತ್ತ ಸ್ವಾಮಿ ರಂಗನಾಥಾನಂದರು ಮಾನವ ಮನದ ಉನ್ನತಿಗಾಗಿ ಭಗವಂತ ನೀಡಿದ ಗೀತೆಯನ್ನು ಸಾರ್ಥಕವಾಗಿ ಬಳಸಬಹುದೆಂದೂ, ಹಾಗೆ ಬಳಸಿಕೊಂಡಾಗಲೇ ರಾಷ್ಟ್ರದ, ಸಮಾಜದ, ಮಾನವತೆಯ ಉನ್ನತಿ ಸಾಧ್ಯವೆಂದೂ ನುಡಿದರು. ಶ್ರೀಯುತರು ಮುಂದುವರೆಯುತ್ತ ಭಗವದ್ಗೀತೆಯಲ್ಲಿನ ಸಾರ್ವಕಾಲಿಕ, ಸತ್ಯಗಳನ್ನು ಶ್ರೇಯೋಮಾರ್ಗವನ್ನೂ ಸಾರ್ವಜನಿಕರಿಗೆ ಸರಿಯಾಗಿ ಪರಿಚಯ ಮಾಡಿಕೊಡುವುದು ಹಿಂದೂ ಧರ್ಮರಕ್ಷಣ ಸಂಸ್ಥೆಯಂತಹ ಸಂಘಸಂಸ್ಥೆಗಳ ಗುರಿಯೆಂದೂ ಆ ಕೆಲಸವನ್ನು ಶ್ಲಾಘ್ಯರೀತಿಯಲ್ಲಿ ನಿರ್ವಹಿಸುತ್ತಿರುವ ಸಂಸ್ಥೆ ಅಭಿನಂದನೀಯವೆಂದೂ ನುಡಿದರು.

ಶ್ರೀಯುತರ ಆಂಗ್ಲ ಉಪನ್ಯಾಸವನ್ನು ಧರ್ಮರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ತೆಲುಗಿಗೆ ಅನುವಾದಿಸಿದರು. ಸ್ವಾಮಿ ರಂಗನಾಥಾನಂದಜೀಯವರು ತಿ. ತಿ. ದೇವಸ್ಥಾನಗಳು ನಡೆಸುತ್ತಿರುವ ಅಂಗವಿಕಲರ ಶಿಕ್ಷಣ-ತರಬೇತಿ-ವಿದ್ಯಾಲಯಕ್ಕೂ ಭೇಟಿ ನೀಡಿ ದೇವಸ್ಥಾನಗಳು ಮಾಡುತ್ತಿರುವ ಮಾನವೋಪಯೋಗೀ ಸಮಾಜೋಪಯೋಗೀ ಕಾರ್ಯಕ್ರಮಗಳ ಬಗ್ಗೆ ಸಂತಸ ವ್ಯಕ್ತಪಡಿಸಿದರು.

## ಗೀತಾಜಯಂತಿ

ಹಿಂದೂ ಧರ್ಮ ರಕ್ಷಣಸಂಸ್ಥೆಯ ವತಿಯಿಂದ ಗೀತಾಜಯಂತಿ ಕಾರ್ಯಕ್ರಮವನ್ನು ತಿರುಪತಿ ಹಾಗೂ ಇತರ ಆಂಧ್ರ ಪ್ರದೇಶ ಜಿಲ್ಲಾ ಕೇಂದ್ರಗಳಲ್ಲಿ ನಡೆಸಲಾಯಿತು. ಗೀತೆಯ 16 ನೇ ಅಧ್ಯಾಯದ ಶ್ಲೋಕಗಳಲ್ಲಿ ಗಾಯನ ಸ್ಪರ್ಧೆಗಳನ್ನು ಶಾಲಾಬಾಲಕರಿಗಾಗಿ ಏರ್ಪಡಿಸಿ, ಮೊದಲ ಮೂರು ವಿಜೇತರಿಗೆ ಪುಸ್ತಕಗಳನ್ನು ಬಹುಮಾನಿಸಲಾಯಿತು.

ವಿವಿಧ ಜಿಲ್ಲಾ ಕೇಂದ್ರಗಳಲ್ಲಿ ವಿಶೇಷ ಉಪನ್ಯಾಸಗಳನ್ನೂ ಏರ್ಪಡಿಸಲಾಗಿದ್ದಿತು. ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದ ಗೀತಾಜಯಂತಿ ಉತ್ಸವಗಳಲ್ಲಿ ಅಖಿಲಾಂಧ್ರ ಸಾಧು ಪರಿಷತ್‌ನ ಸ್ವಾಮಿ ನಿರ್ಮಲಾನಂದ ಅವರು ಐದುದಿನಗಳೂ ಉಪನ್ಯಾಸ ಮಾಡಿದರು.



ಗೀತಾ ಉಪನ್ಯಾಸ ಕಾರ್ಯಕ್ರಮದಲ್ಲಿ ಶ್ರೀ ರಂಗನಾಥಾನಂದ ಸ್ವಾಮಿಜಿ, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ಮಾತನಾಡುತ್ತಿರುವವರು ಶ್ರೀ ಕುಮಾರಸ್ವಾಮಿ ರೆಡ್ಡಿ.

ತಿ. ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರು ಉತ್ಸವದ ಕಡೆಯದಿನ ಗೀತಾ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನ ವಿನಿಯೋಗ ಮಾಡಿದರು. ತಿರುಪತಿಯಲ್ಲಿನ ಗೀತಾಜಯಂತಿ ಉತ್ಸವಗಳು ಹಿಂದೂಧರ್ಮ ರಕ್ಷಣ ಸಂಸ್ಥೆ ಹಾಗೂ ಮಲೆಯಾಳ ಸದ್ಗುರು ಸೇವಾಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ ನಡೆದವು. ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ಸಭೆಯನ್ನು ಸ್ವಾಗತಿಸಿ ಸಂಸ್ಥೆಯ ಕಾರ್ಯಚಟುವಟಿಕೆಗಳ ವಿವರ ನೀಡಿದರು.



ಗೀತಾ ಜಯಂತಿ ಕಾರ್ಯಕ್ರಮದಲ್ಲಿ ಮಾತನಾಡುತ್ತ ಶ್ರೀ ಡಿ. ಸುಬ್ಬರಾಯುಲು. ಎಡ ಕೊನೆಯಲ್ಲಿ ಕುಳಿತಿರುವವರು ಅಖಿಲಾಂಧ್ರ ಸಾಧು ಪರಿಷತ್‌ನ ಶ್ರೀ ಸ್ವಾಮಿ ನಿರ್ಮಲಾನಂದ.

ಮುಂದಿನ ಸಂಚಿಕೆಯಲ್ಲಿ .... .... ....

ಸಪ್ತಗಿರಿ - — ಮಾರ್ಚ್ 1984

ದ್ರಾವಿಡೋಪನಿಷತ್ ತಾತ್ಪರ್ಯ ರತ್ನಾವಳಿ
– ಡಾ॥ ಎನ್. ಅನಂತರಂಗಾಚಾರ್

ಈಶ್ವರ ತತ್ತ್ವ
– ಡಿ. ಕೃಷ್ಣಯ್ಯಂಗಾರ್

ಕಲಶೇಶ್ವರ ಸ್ವಾಮಿ
– ಬಿ. ಷಣ್ಮುಖಾಚಾರ್ಯ

ಶ್ರೀ ಕೃಷ್ಣ ದ್ವಾರಕಾ
– ಆದ್ಯ ರಾಮಾಚಾರ್ಯ

ಭಕ್ತಿ ಯೋಗ
– ಕೆ. ಕೇಶವಮೂರ್ತಿ

ಗುರು - ಆಚಾರ್ಯ
– – ವಿ. ಎಸ್. ರಾಮಾಚಾರ್ಯ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## 1984
## ಮಾರ್ಚ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 2. | ಶುಕ್ರವಾರ | ತಿರುಕಚ್ಚಿನಂಬಿ ಉತ್ಸವಾರಂಭ. |
| 13. | ಮಂಗಳವಾರ | ಕುಲಶೇಖರಾಳ್ವಾರ್ ತಿರುನಕ್ಷತ್ರ. ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 17. | ಶನಿವಾರ | ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ. ತುಂಬುರ ತೀರ್ಥ ಮುಕ್ಕೋಟಿ, ಹೋಳಿ ಹಬ್ಬ. |
| 21. | ಬುಧವಾರ | 1906 ಶಾಲಿವಾಹನ ಶಕಾರಂಭ. |
| 25. | ಭಾನುವಾರ | ನಾಗಲಾಪುರಂ ಶ್ರೀ-ವೇದನಾರಾಯಣಸ್ವಾಮಿಯವರ – ಸೂರ್ಯ ಸೇವಾ ಸಂದರ್ಭದಲ್ಲಿ ತೆಪ್ಪೋತ್ಸವದ ಆರಂಭ. |
| 27. | ಮಂಗಳವಾರ | ನಾಗಲಾಪುರ ಶ್ರೀ ವೇದನಾರಾಯಣಸ್ವಾಮಿ – ತೆಪ್ಪೋತ್ಸವ ಸಮಾಪ್ತಿ. |
| 29. | ಗುರುವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ – ಅಂಕುರಾರ್ಪಣೆ. |
| 30. | ಶುಕ್ರವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ – ಧ್ವಜಾರೋಹಣ. |

## ರಕ್ಷಾಪತ್ರ ಚಿತ್ರಸೂಚಿ

ಮುಖಚಿತ್ರ :

ಶ್ರೀವೆಂಕಟೇಶ್ವರಸ್ವಾಮಿ ಸೇವೆಯಲ್ಲಿ ಐವತ್ತು ವರ್ಷಗಳನ್ನು ಯಶಸ್ವಿಯಾಗಿ ಮುಗಿಸಿರುವ ತಿ. ತಿ. ದೇವಸ್ಥಾನಗಳ ಆಡಳಿತವ್ಯವಸ್ಥೆ.

ಒಳ ಪುಟಗಳಲ್ಲಿ :

1. ಶ್ರೀವೆಂಕಟೇಶ್ವರ ಬಾಲ ಮಂದಿರ್.
2. ಶಿಲ್ಪ ಕಳಾಶಾಲೆ
3. ಸ್ತ್ರೀಯರ ತಾಂತ್ರಿಕ ಶಿಕ್ಷಣ ಶಾಲೆ.
4. ಶ್ರೀವೆಂಕಟೇಶ್ವರಸ್ವಾಮಿ ಆರ್ಟ್ಸ್ ಕಾಲೇಜು
5. ಮೂಗ–ಬಧಿರ ಪಾಠಶಾಲೆ.
6. ಶ್ರೀವೆಂಕಟೇಶ್ವರಸ್ವಾಮಿ ಪ್ರೌಢಶಾಲೆ.
7. ಶ್ರೀವೆಂಕಟೇಶ್ವರ ಸಂಗೀತ ಕಲಾಶಾಲೆ.
8. ಶ್ರೀ ಪದ್ಮಾವತೀ ಸ್ತ್ರೀಯರ ಕಾಲೇಜು.
9. ಕ್ಯಾಂಟೀನ್ ಕಾಂಪ್ಲೆಕ್ಸ್ ತಿರುಮಲೆ.
10. ಉಚಿತ ಸತ್ರ. ತಿರುಪತಿ.
11. ಶ್ರೀವೆಂಕಟೇಶ್ವರ ಪೂರ್ ಹೋಂ. ಅಕ್ಕಾರಾಮಪಲ್ಲಿ.
12. ಅನ್ನಮಾಚಾರ್ಯ ಕಲಾಮಂದಿರ, ತಿರುಪತಿ.
13. ಆಂಧ್ರ ಆಶ್ರಮ, ಋಷೀಕೇಶ.
14. ಉಚಿತ ವೈದ್ಯಶಾಲೆ, ತಿರುಪತಿ.
15. ಕಲ್ಯಾಣ ಕಟ್ಟೆ, ತಿರುಮಲೆ.
16. ಎಸ್. ವಿ. ಅತಿಥಿಗೃಹ, ತಿರುಮಲೆ.

ಹಿಂಬದಿಯಲ್ಲಿ :

1. ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.
2. ವೆಂಕಟೇಶ್ವರಾಲಯ, ಪಿಟ್ಸ್‌ಬರ್ಗ, ಅಮೆರಿಕಾ
3. ವೇದನಾರಾಯಣಸ್ವಾಮಿ ದೇವಾಲಯ ನಾಗಲಾಪುರಂ.
4. ಕೋದಂಡರಾಮಸ್ವಾಮಿ ಆಲಯ, ತಿರುಪತಿ
5. ಪದ್ಮಾವತೀ ದೇವಾಲಯ, ತಿರುಚಾನೂರು
6. ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ ಶ್ರೀನಿವಾಸಮಂಗಾಪುರ
7. ಕಪಿಲೇಶ್ವರಾಲಯ, ತಿರುಪತಿ
8. ಕಲ್ಯಾಣ ವೆಂಕಟೇಶ್ವರಸಾಮಿ ದೇವಾಲಯ ನಾರಾಯಣವನಂ.

ಚಿತ್ರಗಳು :

ತಿ. ತಿ. ದೇ. ಫೋಟೋಗ್ರಫಿ ಸೆಕ್ಷನ್.

ಕಲೆ:

ಕೆ. ಜಗದೀಶ್.

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

